
వస్తోంది!

## ಈ ವರ್ಷದ ಅತ್ಯುತ್ತಮ ಮಹೋನ್ನತ ಚಿತ್ರ!



ಶೋಭನಾಚಲರವರ :

# ತಿಲೋತ್ತಮು

ತೆಲುಗು

ಅಂಜಲೀದೇವಿ – ನಾಗೇಶ್ವರರಾವ್ – ಸೂರ್ಯಪ್ರಭಾ

ಅತಿ ಶೀಘ್ರದಲ್ಲಿಯೇ ನಿಮ್ಮ ನೆಚ್ಚಿನ ಚಿತ್ರಮಂದಿರಗಳಾದ

## ಮೂವಿಲ್ಯಾಂಡ್ ಮತ್ತು ಶಾರದ ಟಾಕಿಸುಗಳಲ್ಲಿ

ಪ್ರದರ್ಶಿತವಾಗಲಿರುವ ತಾರೀಖನ್ನು ಗಮನಿಸಿ!

**YESHWANTH FILM COMPANY RELEASE**

# ಮುಖಚಿತ್ರ

ಕಂಸನಿಗೆ ಅಸ್ತಿ ಪ್ರಾಸ್ತಿಯೆಂಬ ಭಾರ್ಯೆಯರಿಬ್ಬರಿದ್ದರು. ಕಂಸನು ಹತನಾದಮೇಲೆ ಇಬ್ಬರೂ ಬೇರೆ ದಾರಿ ಕಾಣದೆ ತಮ್ಮ ತಂದೆಯಾದ ಮಗಧರಾಜ ಜರಾಸಂಧನಲ್ಲಿಗೆ ಹೋಗಿ ತಮ್ಮ ದುಃಖವನ್ನೆಲ್ಲಾ ತೋಡಿಕೊಂಡರು. ಜರಾಸಂಧ ಮಹಾಬಲಶಾಲಿ ಮತ್ತು ಸಾಹಸಿ. ಕಂಸನ ಗತಿಯನ್ನೂ ತನ್ನ ಕುಮಾರ್ತೆಯರ ದುರವಸ್ಥೆಯನ್ನೂ ನೋಡಿ ಆತನ ಕರುಳು ಕಿವಿಚಿದಂತಾಯಿತು. ರೋಷದಿಂದ ಉಗ್ರನಾಗಿ ತನ್ನ ಮಕ್ಕಳ ಈ ಗತಿಗೆ ಕಾರಣರಾದ ಕೃಷ್ಣಬಲರಾಮರನ್ನು ಸಂಪೂರ್ಣ ಯಾದವಕುಲದೊಂದಿಗೆ ನಾಶಪಡಿಸುವುದಾಗಿ ಪಣ ತೊಟ್ಟು ಕೂಡಲೇ 23 ಅಕ್ಷೋಹಿಣಿ ಸೈನ್ಯ ಕಟ್ಟಿ ಚತುರಂಗಬಲ ಸಮೇತನಾಗಿ ಮಧುರೆಯನ್ನು ಮುತ್ತಿದನು. ಕೃಷ್ಣನೂ ಸೈನ್ಯದೊಡನೆ ಅವನನ್ನೆದುರಿಸಿದನು. ಅತಿ ಘೋರಯುದ್ಧ ನಡೆಯಿತು. ಕೃಷ್ಣನ ಇಚ್ಛೆಯಂತೆ ಜರಾಸಂಧನ 23 ಅಕ್ಷೋಹಿಣಿ ಸೈನ್ಯವೂ ಹೇಳ ಹೆಸರಿಲ್ಲದಂತೆ ನಾಶವಾಯಿತು. ಜರಾಸಂಧನು ಸೆರೆಯಾದನು. ಆದರೆ ದುಷ್ಟಶಕ್ತಿಯುಳ್ಳ ಜನವನ್ನೂ, ಭೂಭಾರವನ್ನೂ ಪರಿಹರಿಸುವ ಮುಂದಾಲೋಚನೆಯಿಂದ ಕೃಷ್ಣನು ಜರಾಸಂಧನನ್ನು ಕೊಲ್ಲದೆ ಕ್ಷಮಿಸಿ ಬಿಟ್ಟುಬಿಟ್ಟನು. ಅದರಂತೆಯೇ ಜರಾಸಂಧನು ಸೋತರೂ ತನ್ನ ಛಲ ಬಿಡದೆ ತನ್ನ ಪಣ ಪೂರ್ತಿಗೊಳಿಸಲು ಮತ್ತೆ ಮತ್ತೆ ಪ್ರಚಂಡ ಸೈನ್ಯಬಲದೊಡನೆ ಮಧುರೆಯನ್ನು ಮುತ್ತುತ್ತಿದ್ದನು. ಆದರೆ ಪ್ರತಿ ಸಲವೂ ತನ್ನ ಸೈನ್ಯವನ್ನೆಲ್ಲಾ ನಾಶಗೊಟ್ಟು ಕೃಷ್ಣನಿಂದ ಪರಾಜಿತನಾಗಿ ಹಿಂತಿರುಗುತ್ತಿದ್ದನು. ಹೀಗೆ ಹದಿನೇಳು ಬಾರಿ ಪರಾಜಿತನಾದರೂ ತನ್ನ ಹಠಮಾತ್ರ ಬಿಡಲಿಲ್ಲ. ಹದಿನೆಂಟನೆಯ ಬಾರಿ ತನ್ನ ಸಾಮಂತರಾಜರ ಸೈನ್ಯಬಲವನ್ನೆಲ್ಲಾ ಕೂಡಿಸಿಕೊಂಡು ಸಮುದ್ರವೇ ಉಕ್ಕಿ ಬಂದಂತೆ ಮಧುರೆಯ ಕಡೆಗೆ ಸಾಗಿ ಬರಹತ್ತಿದನು.

ಅಷ್ಟರಲ್ಲಿ ಅತಿಪರಾಕ್ರಮಿಯೆಂದೆನಿಸಿಕೊಂಡ ಕಾಲಯವನನೆಂಬ ಮ್ಲೇಚ್ಛನಾಯಕನೊಬ್ಬನು ಯಾದವರ ಸಂಪತ್ತನ್ನು ಸೂರೆಗೊಳ್ಳಲು ಮತ್ತೊಂದು ಮಹಾ ಸಾಗರದೋಪಾದಿಯಲ್ಲಿ 3 ಕೋಟಿ ಮ್ಲೇಚ್ಛಸೈನ್ಯದೊಡನೆ ಬಂದು ಮಧುರಾಪಟ್ಟಣವನ್ನು ಮುತ್ತಿದನು. ಈ ಉಭಯ ವಿಪತ್ತನ್ನೂ ನೋಡಿ ಪಟ್ಟಣಕ್ಕೆ ಪಟ್ಟಣವೇ ಭಯದಿಂದ ತಲ್ಲಣಿಸಿತು. ಪಟ್ಟಣದ ನಾಶಸನ್ನಿಹಿತವೆಂದರಿತು ಕೃಷ್ಣನೂ ಬಲರಾಮನೊಂದಿಗೆ ಸಮಾಲೋಚಿಸಿ ಬೇರೊಂದು ಶೀಘ್ರೋಪಾಯವನ್ನು ಕೈಕೊಂಡನು. ಯಾದವಕುಲ ಸಂರಕ್ಷಣಾರ್ಥವಾಗಿಯೂ ಮುಂದಿನ ಕೆಲಸಗಳಿಗೆ ಅನುಕೂಲಾರ್ಥವಾಗಿಯೂ ಉಪಯೋಗಪಡುವಂತೆ ಸಮುದ್ರಮಧ್ಯದಲ್ಲಿ ಕ್ಷಣಮಾತ್ರದಲ್ಲಿ ಒಂದು ಜಲದುರ್ಗವನ್ನು ನಿರ್ಮಿಸಿದನು. ಅದೇ ಶ್ರೀಕೃಷ್ಣನ ಯೋಗಮಾಯೆಯಿಂದ ನಿರ್ಮಿಸಲ್ಪಟ್ಟ ದ್ವಾರಕಾಪುರಿಯು. ಸಕಲ ಸೌಲಭ್ಯಗಳಿಂದೊಡಗೂಡಿ ಸ್ವರ್ಣಶಿಖರಗಳಿಂದಲೂ, ಕೊಳಕಟ್ಟೆ, ಸುಂದರೋದ್ಯಾನಗಳಿಂದಲೂ ಸಕಲವಿಧ ಫಲವೃಕ್ಷ ಹೂಗಿಡಗಳಿಂದ ತುಂಬಿ ಹನ್ನೆರಡು ಯೋಜನವಿಸ್ತೀರ್ಣವುಳ್ಳದಾಗಿ ಪ್ರಾಕಾರದಿಂದಾವರಿಸಲ್ಪಟ್ಟು ಕಂಗೊಳಿಸುತ್ತಿತ್ತು ಆ ದ್ವಾರಕಾಪುರಿ. ಸಾಲದುದಕ್ಕೆ ಇಂದ್ರನೂ ಅಲ್ಲಿಗೆ ಸುಧರ್ಮೆಯನ್ನೂ ದೇವಪಾರಿಜಾತವನ್ನೂ, ಕುಬೇರನು ಅಷ್ಟವಿಧೈಶ್ವರ್ಯಗಳನ್ನೂ ಕಳುಹಿಸಿ ಕೊಟ್ಟರು.

ಮತ್ತೆ ಯೋಗಮಾಯೆಯಿಂದ ಕೃಷ್ಣನು ಮಧುರೆಯಲ್ಲಿದ್ದ ಸಮಸ್ತ ಪಶು ಪಕ್ಷಿ ಮನುಷ್ಯಾದಿಗಳನ್ನೂ ದ್ವಾರಕಿಗೆ ಸೇರಿಸಿ ತಾನು ಮಾತ್ರ ಭೂಭಾರ ಪರಿಹಾರಾರ್ಥವಾಗಿ ಯವನರನ್ನು ನಾಶಪಡಿಸಲು ಹೊರಟನು.



ವಿಜಯ ರವರ...
ಪಾತಾಳ ಭೈರವಿ
Direction
K.V. REDDI, B.Sc. (Hons)
Produced by - NAGI REDDI...CHAKRAPANI...

ಸಂಪುಟ ೨
ಸಂಚಿಕೆ ೩

ಮಾರ್ಚಿ
೧೯೫೧

# ಚಂದಮಾಮ

## ನಮ್ಮೂರು!

ಇಲ್ಲಿದೆ ನೋಡಿರಿ, ನಮ್ಮೂರು!
ಈ—ಕೆರೆಯಂಚಿನ ಬಳಿ ನಮ್ಮೂರು!
ಗಿಳಿಗಳು ಹಾರುವ ನಮ್ಮೂರು
ಬಲು—ಕಲಿಗಳ ಬೆಳೆಸಿದ ನಮ್ಮೂರು
ಹೂಗಳ ತೋಟದ ನಮ್ಮೂರು
ಆ—ಬಾಳೆಯ ತೆಂಗಿನ ನಮ್ಮೂರು
ಪಚ್ಚೆಯ ಪೈರಿನ ನಮ್ಮೂರು
ಬಲು—ಮೆಚ್ಚಿದ ಹಿರಿಯರ ನಮ್ಮೂರು
ಬೆಳೆಗಳ, ಕಲೆಗಳ ನಮ್ಮೂರು
ಸಲೆ—ಹೊಳೆ, ಕೆರೆ, ಬಾವಿಯ ನಮ್ಮೂರು
ದೇವಾಲಯಗಳ ನಮ್ಮೂರು
ಈ—ನಾಡಿನ ಕಳಸವು ನಮ್ಮೂರು!
ಇಲ್ಲಿದೆ ನೋಡಿರಿ, ನಮ್ಮೂರು!
ಈ—ಕೆರೆಯಂಚಿನ ಬಳಿ ನಮ್ಮೂರು.

—ಮು. ವೆಂಕಟಕೃಷ್ಣಪ್ಪ





# ಅಣ್ಣನ ಪತ್ರ

ಒಲವಿನ ಮಕ್ಕಳಿರಾ, ನೀವೆಲ್ಲಾ ಕಳುಹಿಸಿದ ಲೇಖನಗಳಲ್ಲಿ ಉತ್ತಮವಾದುದನ್ನು ಇಟ್ಟು ಕೊಂಡು ಬೇಡವಾದುವಲ್ಲಿ ಅಂಚೆ ಚೀಟಿ ಇದ್ದಂತಹುವನ್ನು ಹಿಂದಕ್ಕೆ ಕಳಿಸಿದ್ದೇನೆ. ಅಂಚೆ ಚೀಟು ಇಟ್ಟೂ ನಿಮ್ಮ ಲೇಖನ ಹಿಂದಕ್ಕೆ ಬರದಿದ್ದಲ್ಲಿ ಪ್ರಕಟನೆಗಾಗಿ ಸ್ವೀಕೃತವಾಗಿದೆಯೆಂದು ತಿಳಿಯಿರಿ. ಆದರೆ ಅನೇಕರು ತಮ್ಮ ವಿಳಾಸಗಳನ್ನು ಸ್ಪಷ್ಟವಾಗಿ ಪೂರ್ತಿಯಾಗಿ ಬರೆದಿಲ್ಲವಾದುದರಿಂದ ಅವು ತಲಪದಿದ್ದರೆ ಅಣ್ಣನ ಜವಾಬ್ದಾರಿಯಲ್ಲ, ತಿಳಿಯಿತೆ?

ಚಂದಮಾಮ ಪ್ರತಿ. ತಿಂಗಳೂ ಕನ್ನಡನಾಡಿನ ಮೂಲೆ ಮೂಲೆಗೂ ಹೊಕ್ಕು ನಾಲ್ಕು ಲಕ್ಷಕ್ಕಿಂತ ಹೆಚ್ಚು ಹಿರಿಕಿರಿಯರನ್ನು ಆಹ್ಲಾದಗೊಳಿಸುತ್ತಿರುವುದು ಎಲ್ಲರಿಗೂ ಹೆಮ್ಮೆಯ ವಿಚಾರ ವಲ್ಲವೆ! ಇಂತಹ ಮಕ್ಕಳ ಒಲವಿನ ಪತ್ರಿಕೆಯಲ್ಲಿ ನಿಮ್ಮ ಲೇಖನ ಹೆಸರಿನೊಂದಿಗೆ ಅಚ್ಚಾಗುವು ದನ್ನು ನೋಡಿ ನಿಮಗೆ ಎಷ್ಟು ಆನಂದ, ಆಸೆ, ಉತ್ಸಾಹವಾಗುತ್ತದೆಂಬುದು ನನಗೆ ಗೊತ್ತು.

ಆದರೆ ಆ ಉತ್ಸಾಹ ಪೂರೈಸಲು ಅಡ್ಡದಾರಿ ಹಿಡಿಯಬಾರದು. ಈಚೆಗೆ ಚಂದಮಾಮ ಪ್ರಕಟಿಸಿದ 'ಅರ್ಗಣೆ ಮುದ್ದೆ' 'ಮಂಗಪ್ಪಾಜಿ ಪುರಾಣ'ವೂ ಕದ್ದು ಕಳಿಸಿದ ಕೃತಿಗಳೇ ಎಂದು ತಿಳಿದು ಬಂದಿದೆ. ಅದು ನಿಜವೇ ಆದ ಪಕ್ಷದಲ್ಲಿ ಅದನ್ನು ಕಾಪಿ ಮಾಡಿ ತಮ್ಮದೆಂದು ಬರೆದು ಕಳಿಸಿದ ತಮ್ಮಂದಿರು, ಚಂದಮಾಮದಲ್ಲಿ ತಮ್ಮ ಹೆಸರು ನೋಡಿ ಹಿಗ್ಗುವುದಕ್ಕಿಂತ ಕಳ್ಳತನ ಕ್ಕಾಗಿ ನಾಚಿಕೊಂಡು ಮುಖ ತಗ್ಗಿಸಬೇಕಾಗಿದೆ. ಈ ರೀತಿ ಪುನಃ ಯಾರೂ ಮಾಡಬಾರದೆಂದು ಚಂದಮಾಮ ಕೋರುತ್ತಾನೆ. ಮುಂದೆ ಆ ರೀತಿ ಮಾಡುವುದಿಲ್ಲವೆಂದು ತಪ್ಪು ಮಾಡಿದ ತಮ್ಮಂದಿರು ಅಣ್ಣನಿಗೆ ಕಾಗದ ಬರೆಯಲಿ. ಮತ್ತು ಈಗಾಗಲೇ ಆ ರೀತಿ ಕಾಪಿ ಮಾಡಿ ಲೇಖನಗಳನ್ನು ಕಳುಹಿಸಿರುವ ಇತರರೂ ಕೂಡಲೇ ಪತ್ರದಲ್ಲಿ ಅಂತಹ ಲೇಖನದ ಹೆಸರು ಬರೆದು ಅದನ್ನು ಪ್ರಕಟಿಸಬಾರದೆಂದು ಬರೆದರೆ ಈ ರೀತಿ ಅವಮಾನವೂ ತೊಂದರೆಯೂ ತಪ್ಪೀತು. ಒಂದು ಪುಸ್ತಕದಿಂದ ಒಬ್ಬರ ಲೇಖನ ಅಕ್ಷರಶಃ ಕದ್ದು ತಮ್ಮ ಹೆಸರಿನಿಂದ ಮತ್ತೊಂದು ಪುಸ್ತಕಕ್ಕೆ ಕೊಡುವುದು ತಪ್ಪೆಂದು ಮಕ್ಕಳೆಲ್ಲರೂ ತಿಳಿಯಬೇಕು. ಇಂತಹ ಕೆಲಸಗಳಿಂದ ಕನ್ನಡ ನಾಡಿಗೆ ಗೌರವವಿಲ್ಲವೆಂದು ಎಲ್ಲರೂ ಗಮನಿಸಬೇಕು.

ಮಕ್ಕಳಿರಾ, ನಿಮ್ಮ ಅಭ್ಯುದಯಕ್ಕಾಗಿ ಮಾಮನು ಈ ಹಿತೋಕ್ತಿ ಹೇಳುತ್ತಾನೆ. ಇಂದಿನ ಮಕ್ಕಳು ನೀತಿವಂತರೂ ಸದ್ಗುಣಿಗಳೂ ಆದರೆ ಮುಂದೆ ನಿಮ್ಮಿಂದ ಕನ್ನಡನಾಡು ಸುಖ, ಶಾಂತಿ, ಧರ್ಮ ಕರ್ಮಗಳಿಂದ ತುಂಬಿ ತುಳುಕಿ ರಾಮರಾಜ್ಯವನ್ನು ಮೀರಿಸೀತು. ಸಿರಿಗನ್ನಡನಾಡು, ನಲ್ಮೆಯ ಬೀಡು, ಶಾಂತಿಯ ನೆಲೆವೀಡು, ಹೊನ್ನಿನಗೂಡು ಎಲ್ಲವೂ ನಿತ್ಯಸತ್ಯವಾದೀತು. ನಿಮ್ಮ ತಾಯಿನಾಡನ್ನು ಧರ್ಮಭೂಮಿಯನ್ನಾಗಿಸಿ ಸ್ವರ್ಗದಂತೆ ಮೆರೆಸುವುದೂ, ಅಥವಾ ಸುಳ್ಳು, ಕಪಟ, ಅಧರ್ಮದ ಹಾದಿಯಲ್ಲಿ ಪ್ರತ್ಯಕ್ಷ ನರಕವನ್ನಾಗಿ ಕೆಡಿಸುವುದೂ ನಿಮ್ಮ ಕೈಯ್ಯಲ್ಲೇ ನಿಮ್ಮ ನಡತೆಯಲ್ಲೇ ಇದೆ. ಇದನ್ನು ನೆನಪಿಡಿ. ನಿಮ್ಮ ಉದ್ಧಾರ ನಾಡಿನ ಮೇಲ್ಮೆಯನ್ನವಲಂಬಿ ಸಿದೆ. ನಾಡಿನ ಉದ್ಧಾರ ನಿಮ್ಮ ಮೇಲ್ಮೆಯನ್ನವಲಂಬಿಸಿದೆ. ಆದುದರಿಂದ ನೀವೂ, ನಿಮ್ಮಿಂದ ದೇಶವೂ ಅಭಿವೃದ್ಧಿ ಹೊಂದುವುದಕ್ಕೋಸ್ಕರ ನೀವೆಲ್ಲರೂ ಹೆಚ್ಚು ನೀತಿವಂತರೂ ಸುಗುಣಿಗಳೂ ಆಗಲೆಂಬುದೇ ಮಾಮನ ಹಿರಿಯಾಸೆ. ಅಂತೆಯೇ ನೀವೆಲ್ಲರೂ ಕನ್ನಡ ನಾಡಿನ ಕೀರ್ತಿ ಪತಾಕೆ ಯನ್ನು ಮೇಲೇರಿಸುವಿರೆಂದು ಚಂದಮಾಮನಿಗೆ ಭರವಸೆ ಇದೆ.

ಸಿರಿಗನ್ನಡಂಗೆಲ್ಗೆ.

ನಿಮ್ಮ ಅಣ್ಣ—ಎಂ. ಟಿ. ವಿ. ಆಚಾರ್ಯ,

# ಕತ್ತೆ-ಎತ್ತು

ಪೂರ್ವದಲ್ಲಿ ಒಬ್ಬ ಪಾಳೇಗಾರ ಇದ್ದ. ಅವನಿಗೆ ತುಂಬ ಐಶ್ವರ್ಯ ಸಂಪಾದಿಸಬೇಕೊಂತ ಆಸೆ. ಆದ್ದರಿಂದ ಧುಮಾರ್ಗದಿಂದ ಸಂಪಾದಿಸತೊಡಗಿದ. ಅವನು ಊರ ಹೊರಗಡೆ ದಾರಿಯಲ್ಲಿ ಸಿಕ್ಕಿದವರನ್ನು ಹೊಡೆದು ಬಡಿದು ಹಣ ಕಿತ್ತುಕೊಂಡು ದ್ರವ್ಯ ಕೂಡಿ ಹಾಕಿಡುತ್ತಿದ್ದ. ಬರಬರುತ್ತ ಅವನ ಖಜಾನೆ ತುಂಬಿಹೋಯ್ತು. ಹಣ ಹೆಚ್ಚಿದಷ್ಟೂ ಭಯ ಬಂತು. ಒಂದುವೇಳೆ ನೆರೆರಾಜ ಮುತ್ತಿಗೆ ಹಾಕಿ ಖಜಾನೆ ಕೊಳ್ಳೆ ಹೊಡೆದರೆ?—ತಾನು ಕಷ್ಟಪಟ್ಟು ಸಂಪಾದಿಸಿದುದೆಲ್ಲಾ ಹೋಗುತ್ತಲ್ಲಾ ಎಂದು. ಆದ್ದರಿಂದ ಮಂತ್ರಿಯನ್ನು ಕರೆದು ದ್ರವ್ಯವನ್ನು ಎಲ್ಲಿಡಬೇಕೆಂದು ಸಮಾಲೋಚಿಸಿದ. ಅದಕ್ಕೆ ಮಂತ್ರಿ ಹೇಳಿದ. "ಅಯ್ಯಾ ದೊರೆ, ಊರ ಹೊರಗೆ ಒಂದು ದೇವಸ್ಥಾನ ಕಟ್ಟಿಸು. ಅದರೊಳಗೆ ಒಂದು ಲಿಂಗ ಇಡಿಸು. ಆ ಲಿಂಗದ ಕೆಳಗೆ ಒಂದು ಮಳಿಗೆ ಕಟ್ಸು; ಅಲ್ಲಿ ದ್ರವ್ಯ ಕೂಡಿ ಹಾಕು. ಯಾರಿಗೂ ಗುಟ್ಟು ಗೊತ್ತಾಗೊಲ್ಲ. ಅನುಮಾನವೂ ಬರುವುದಿಲ್ಲ. ಅದು ದೇವಸ್ಥಾನ ಅಂತ ತಿಳಿದುಕೊಳ್ಳುತ್ತಾರೆ" ಅಂದ. ಪಾಳೆಗಾರ ತುಂಬ ಸಂತೋಷಪಟ್ಟು ಮಂತ್ರಿಗೆ ಬೇಕಾದಷ್ಟು ಮರ್ಯಾದೆ ಮಾಡಿ ಕಳಿಸಿದ.

ದೇವಸ್ಥಾನ ಕಟ್ಟಿಸಿಯಾಯಿತು. ಗುಟ್ಟಾಗಿ ದ್ರವ್ಯ ಕೂಡಿ ಹಾಕಿದ್ದಾಯಿತು. ಒಂದುದಿನ ಅವನಿಗೆ ಒಂದು ಅನುಮಾನ ಬಂತು. ಯಾರಾದರೂ ದಾರಿ ಹೋಕರು ದೇವಸ್ಥಾನಕ್ಕೆ ಬಂದು ಪೂಜಾರಿಯೇ ಇಲ್ಲದಿದ್ದರೆ ನಿಜವಾಗಿಯೂ ಸಂದೇಹಪಡುತ್ತಾರೆ. ನಮ್ಮ ಗುಟ್ಟು ರಟ್ಟಾಗುತ್ತದಲ್ಲಾ ಎಂದು ಒಬ್ಬ ಪೂಜಾರಿಯನ್ನು ತರಲು ಆಜ್ಞೆ ಮಾಡಿದ.

ಆ ದಿನ ರಾತ್ರಿ ಆ ಊರಿನಲ್ಲಿ ಯಾವನೋ ಒಬ್ಬ ಶಾಸ್ತ್ರಿ ಬೆಳಗ್ಗೆ 'ಬ್ರಾಹ್ಮಣಾರ್ಥ' ಮುಗಿಸಿಕೊಂಡು ತನ್ನ ಊರಿಗೆ ಹೋಟಿದ್ದ. ಹೋಗುವಾಗ ಪಾಳೆಗಾರನ ಊರು ದಾಟಿ ಹೋಗಬೇಕಾಗಿತ್ತು. ಸರಿ, ಆ ಕಡೆ ಬಂದ ಸಮಯ ಕಾಯುತ್ತಿದ್ದ ಪಾಳೆಗಾರನ ಕಳ್ಳರು ಬಂದು ಅವನಿಗೆ ದೊಣ್ಣೆ ಸೇವೆ ಮಾಡಿ ಹತ್ತಿರವಿದ್ದದ್ದನ್ನೆಲ್ಲಾ ಕಿತ್ತುಕೊಂಡು ಕೊಲ್ಲಲು ಸನ್ನದ್ಧರಾದರು. ಶಾಸ್ತ್ರಿ ಬಹಳ ಹೆದರಿ "ಇಲ್ಲಾ ಸ್ವಾಮಿ ನೀವು ಹೇಳಿದ ಕೆಲಸ ಮಾಡ್ತೀನಿ ಕೊಲ್ಲಬೇಡಿ" ಎಂದು ಅಂಗಲಾಚಿದ. ತಕ್ಷಣ ಪಾಳೆಗಾರನ ಆಜ್ಞೆ ಅವರಿಗೆ ಜ್ಞಾಪಕಕ್ಕೆ ಬಂದು "ಎಲೋ ನೀನು ನಮ್ಮೂರಿನ ದೇವಸ್ಥಾನಕ್ಕೆ ಪೂಜಾರಿ ಆಗಬೇಕು' ಎಂದರು. 'ಆಗಲಿ' ಎಂದು ಒಪ್ಪಿಕೊಂಡ ಶಾಸ್ತ್ರಿ. ಮಾರನೆ ದಿನದಿಂದ ಪೂಜೆಯು ಶುರು ಆಯ್ತು. ಶಾಸ್ತ್ರಿಯ ವಾಸವೂ ಅಲ್ಲೇ ಆಯಿತು. ಪಾಳೆಗಾರ ದ್ರವ್ಯ ತೆಗೆದುಕೊಳ್ಳಬೇಕಾದರೆ ಇಡಬೇಕಾದರೆ ಪೂಜಾರಿಯನ್ನು ಕುರಿತು "ಲೋ! ಪೂಜಾರಿ, ಇವತ್ತು ನಾನೇ ಪೂಜೆ ಮಾಡ್ತೀನೆ ನಾಳೆ ಬಾ!" ಎಂದು ಹೇಳಿ ಕಳಿಸಿಬಿಡುತ್ತಿದ್ದನು.

ಹೀಗೇ ಇರಲು, ಪಾಳೇಗಾರನಿಗೆ ಅಕಸ್ಮಾತ್ ಖಾಯಿಲೆ ಆಯಿತು. ಬದುಕುವುದೂ ಕಷ್ಟ

ವಾಯಿತು. ಆಗ ಪಾಳೆಗಾರ ಯೋಚಿಸಿದ. 'ನಾನು ಕಷ್ಟಪಟ್ಟು ಸಂಪಾದಿಸಿದುದೆಲ್ಲಾ ಮಂತ್ರಿಯ ಪಾಲಾದರೆ ಏನು ಮಾಡುವನೋ?'—ಎಂದು ಆ ಹಣವನ್ನೆಲ್ಲಾ ಬುದ್ಧಿವಂತರ ಪಾಲು ಮಾಡಲು ಒಂದುಪಾಯ ಯೋಚಿಸಿ ಮಂತ್ರಿಯನ್ನು ಬರಮಾಡಿ ಹೀಗೆ ಹೇಳಿದ, "ನೋಡು ನನ್ನ ದ್ರವ್ಯಕ್ಕೆ ಇನ್ನು ನೀನೇ ಒಡೆಯ. ಇನ್ನು ನಾನು ಬದುಕುವುದಿಲ್ಲ. ನನ್ನ ಮನಸ್ಸಿನಲ್ಲಿ ಏನೋ ಕಳವಳ ಇದೆ. ಅದಕ್ಕೆ ಪರಿಹಾರವಾಗಿ ಒಂದು ಕತ್ತಿಯನ್ನೂ ಒಂದು ಎತ್ತನ್ನೂ ಲಿಂಗದ ಎರಡು ಕಡೆಗಳಲ್ಲೂ ಮಾಡಿಸಿಡು" ಎಂದು ಹೇಳಿದ. ಮಂತ್ರಿ ಸರಿ ಎಂದು ಹೋಗಿ ಕೂಡಲೇ ಲೋಹದಲ್ಲಿ ಒಂದು ಕತ್ತಿ ಮತ್ತು ಎತ್ತನ್ನು ಮಾಡಿಸಿದ. ಪಾಳೆಗಾರ ನಿಶ್ಚಿಂತೆಯಾಗಿ ಪ್ರಾಣ ಬಿಟ್ಟ.

ಕೆಲ ದಿನಗಳಲ್ಲೇ ಮಂತ್ರಿಯೂ ಆ ಹಣ ಅನುಭವಿಸದೆ ಪ್ರಾಣ ಬಿಟ್ಟ. ಆ ಧನದ ವಿಷಯ ಇತರರಾರಿಗೂ ತಿಳಿಯದು. ರಾಜ್ಯದಲ್ಲಿ ಪುಂಡರು ಹೆಚ್ಚಿ ರಾಜ್ಯ ಅನಾಯಕವಾಯಿತು. ಹೀಗಿರುವಾಗ ಒಂದು ಸಲ ಒಬ್ಬ ಸನ್ಯಾಸಿ ಆ ದೇವಾಲಯಕ್ಕೆ ಬಂದ. ಅಲ್ಲಿ ಅವನು ಕತ್ತಿ ಎತ್ತುಗಳನ್ನು ನೋಡಿ ಅವಾಕ್ಕಾದ. "ಎಲಾ, ಹಿಂದೂಗಳ ದೇವಸ್ಥಾನದಲ್ಲಿ ಕತ್ತಿ ಎತ್ತು ಎಂದರೇನು? ಏನೋ ಕಾರಣ ಇದೆ. ಈ ಪೂಜಾರಿಯನ್ನು ಕೇಳಿದರೆ ತಿಳಿಯುತ್ತದೆ" ಎಂದು ಶಾಸ್ತ್ರಿಯನ್ನು ಕೇಳಿದ. ಶಾಸ್ತ್ರಿಗೇನು ಗೊತ್ತು? ಸನ್ಯಾಸಿಯೂ ಸುಮ್ಮನಿದ್ದುಬಿಟ್ಟ. ಬಹಳ ದಿನ ಆಯಿತು. ಶಾಸ್ತ್ರಿ ಹೊರಟು ಹೋದ. ಆ ಸನ್ಯಾಸಿ ಯಾರು ಗೊತ್ತೆ? ಪಕ್ಕದ ರಾಜ್ಯದ ರಾಜಕುಮಾರ ವೀರಸಿಂಹ. ಅವನು ಈ ಪಾಳೆಯದ ಗುಟ್ಟು ತಿಳಿಯಲು ಸನ್ಯಾಸಿಯಂತೆ ಬಂದಿದ್ದ. ಅವನು ದೇವಸ್ಥಾನದಲ್ಲೇ ನೆಲೆಸಿದ. ಮತ್ತೊಂದು ದಿನ ಅಲ್ಲಿಗೆ ಒಬ್ಬ ವಿದ್ವಾಂಸ ಬಂದ. ಆತನ ಹೆಸರು ಕಂಕಭಟ್ಟ. ಅವನೂ ದೇವಸ್ಥಾನದ ವಿಚಿತ್ರವನ್ನು ನೋಡಿ ಬೆರಗುಗೊಂಡ "ಇದಲಿ ಸನ್ಯಾಸಿಯನ್ನು ಕೇಳಿದರೆ ಗೊತ್ತಾಗುತ್ತೆ" ಎಂದು ಕೇಳಿದ. ಆಗ ವೀರಸಿಂಹ "ನನಗೂ ಗೊತ್ತಿಲ್ಲ" ಎಂದು ತನ್ನ ವೃತ್ತಾಂತವನ್ನು ಗುಟ್ಟಾಗಿ ಹೇಳಿದ. ವಿದ್ವಾಂಸನೂ ಸನ್ಯಾಸಿಯ ಜೊತೆಯಲ್ಲೇ ನಿಂತ.

ಒಂದುದಿನ ಮಧ್ಯ ರಾತ್ರಿ. ವಿದ್ವಾಂಸ ಲಿಂಗದ ಮುಂದೆ ನಿಂತು ಏನನ್ನೋ ಯೋಚಿಸುತ್ತಿದ್ದ. ಮತ್ತೇನನ್ನೂ ಅಲ್ಲ. ಕತ್ತಿ, ಎತ್ತು, ಲಿಂಗ ಮೂರನ್ನು ಹಾಗೇ ಬಾಯಿಯಲ್ಲಿ ಐದು ಆರು ಸಲ ಉಚ್ಚರಿಸಿದ. ಕಡೆಗೆ ಅವನಿಗೆ ಈ ರೀತಿ ಹೊಳೆಯಿತು. "ಕತ್ತಿ....ಲಿಂಗ....ಎತ್ತು" "ಅಯ್ಯೊ, ಕತ್ತಿ ಸುಮ್ಮನೇಕಿದ್ದೀ ಲಿಂಗವನ್ನು ಎತ್ತು," ಎಂದು ಅರ್ಥ ಮಾಡಿಕೊಂಡು ಓಡಿ ಹೋಗಿ ಸನ್ಯಾಸಿಯನ್ನು ಕರೆದುಕೊಂಡು ಬಂದು ವಿಷಯ ತಿಳಿಸಿದ. ಇಬ್ಬರೂ ಸೇರಿ ಕಷ್ಟಪಟ್ಟು ಲಿಂಗ ಎತ್ತಿದರೆ ಒಂದು ಗುಹೆ. ಅದರಲ್ಲಿ ಒಂದು ಕೊಟ್ಟಿಗೆಯಲ್ಲಿ ಕಣ್ಣು ಕೋರೈಸುವಷ್ಟು ದ್ರವ್ಯ, ವಿತ್ತ. ವೀರಸಿಂಹ ತಕ್ಷಣ ವಿದ್ವಾಂಸನೊಡನೆ ತನ್ನ ರಾಜ್ಯಕ್ಕೆ ಹೋಗಿ ದ್ರವ್ಯ ಸಹಾಯದಿಂದ ಸೈನ್ಯ ಕಟ್ಟಿಕೊಂಡು ಬಂದು ಪುಂಡರನ್ನು ಅಡಗಿಸಿ ಅಪಾರ ಹಣವನ್ನೂ ಊರನ್ನೂ ತನ್ನ ರಾಜ್ಯಕ್ಕೆ ಸೇರಿಸಿಕೊಂಡ. ಕಂಕಭಟ್ಟ ರಾಜನ ಆಸ್ಥಾನದಲ್ಲಿ 'ವಿದ್ಯಾವಿಭೂಷಣ'ನಾದ.



# ರೆಡ್ಡಿಯ ಅದೃಷ್ಟ

ಹರಿಹರ ಅಯ್ಯರ್ ಅನಂತಪುರದಲ್ಲಿ ವಕೀಲ ವೃತ್ತಿ ಮಾಡುತ್ತಿದ್ದ ಒಬ್ಬ ತಮಿಳು ಪ್ಲೀಡರು. ಆತ ಪೂರ್ವಕಾಲದ ಮನುಷ್ಯ. ಎಂದರೆ ಮಡಿ, ಮೈಲಿಗೆ, ಬೊಟ್ಟು, ಜುಟ್ಟು ಮುಂತಾದುವುಗಳನ್ನು ತುಂಬಾ ನಿಷ್ಠೆಯಿಂದ ಆಚರಣೆಯಲ್ಲಿಟ್ಟುಕೊಂಡಿದ್ದ. ಒಂದು ಮಾತಿನಲ್ಲಿ ಹೇಳಬೇಕೆಂದರೆ ಆತನು ಪ್ಲೀಡರಾಗಿ ಲಕ್ಷಾಂತರ ಸಂಪಾದಿಸಿದ್ದರೂ ಪಿಳ್ಳುಜುಟ್ಟು ಮಾತ್ರ ತೆಗೆದು ಹಾಕಿರಲಿಲ್ಲ. ಆತನ ಉಪನಯನದ ದಿನ ಎಲ್ಲಿ ಹೇಗೆ ಬೆಳೆದಿತ್ತೋ ಅದೇ ರೀತಿ ಅದೇ ಜಾಗದಲ್ಲಿ ಶಾಶ್ವತವಾಗಿ ನಿಂತು ಹೋಗಿತ್ತು ಆ ಜುಟ್ಟು. ಈ ರೀತಿ ತಾನು ಪೂರ್ವಾಚಾರ ಪರಾಯಣನಾಗಿರುವುದು ಮಾತ್ರವೇ ಅಲ್ಲದೆ, ಕುಟುಂಬದಲ್ಲಿ ಎಲ್ಲರೂ ತನ್ನ ಹಾಗೆಯೇ ನಡೆದುಕೊಳ್ಳಬೇಕೆಂಬುದು ಆತನ ಉದ್ದೇಶ.

ಅಯ್ಯರಿಗೆ ಹದಿನೈದು ವರ್ಷದ ವೈದ್ಯನಾರ್ಥ ಎಂಬ ಮಗನಿದ್ದ. ವೈದ್ಯನಾರ್ಥ ತುಂಬಾ ಬುದ್ಧಿವಂತ. ಐದನೇ ಫಾರಂನಲ್ಲಿ ಓದುತ್ತಿದ್ದ. ಎಲ್ಲ ಪಾಠಗಳಲ್ಲೂ ಆತನು ಪ್ರಥಮ. ಹೆಚ್ಚು ನಂಬರು ಗಳಿಸುತ್ತಿದ್ದ. ಅದರಿಂದ ಎಲ್ಲರೂ ವೈದ್ಯನಾಥನನ್ನು ತುಂಬಾ ಮೆಚ್ಚಿಕೊಳ್ಳುತ್ತಿದ್ದರು. ಅದುವರೆವಿಗೂ ಸರಿಹೋಯ್ತು. ಆದರೆ ಕಾಲ ಬದಲಾಯಿಸಿದಂತೆಲ್ಲಾ ಕ್ಲಾಸಿನಲ್ಲಿ ವಿದ್ಯಾರ್ಥಿಗಳೆಲ್ಲಾ 'ಕ್ರಾಪು' ಮಾಡಿಸಿಕೊಳ್ಳುತ್ತಿದ್ದರೆ, ವೈದ್ಯನಾಥ ಮಾತ್ರ ತನ್ನ ತಂದೆಯ ಆಜ್ಞೆಯನ್ನು ಅನುಸರಿಸಿ, ಬೋಳು ತಲೆಯ ಮೇಲೆ ಎರಡಂಗುಲ ಪಿಳ್ಳುಜುಟ್ಟಿನೊಂದಿಗೆ ಶಾಲೆಗೆ ಬರುತ್ತಿದ್ದ. ಇದನ್ನು ನೋಡಿ ಸಹಪಾಠಿಗಳೆಲ್ಲಾ ಅವನನ್ನು ಆಕ್ಷೇಪಿಸಿ ಗೇಲಿ ಮಾಡುತ್ತಿದ್ದರು. ಯಾರು ಏನು ಅಂದರೂ ತನ್ನನ್ನ ಕುರಿತು ಅಲ್ಲವೆ ಬ ರೀತಿಯಲ್ಲಿ ವೈದ್ಯನಾರ್ಥ ಅದನ್ನು ಮನಸ್ಸಿಗೆ ಹಚ್ಚಿಕೊಳ್ಳದೆ, ತನ್ನ ದಾರಿ ತಾನು ಹಿಡಿಯುತ್ತಿದ್ದ. ಅಷ್ಟೇ ಹೊರತು ಅವರೊಂದಿಗೆ ಜಗಳವಾಡುತ್ತಿರಲಿಲ್ಲ. ಅವನ ಸಹನೆಗೆ ಎಲ್ಲರೂ ಮೆಚ್ಚಿಕೊಳ್ಳಲೇ ಬೇಕು

ಆದರೆ ಒಂದುದಿನ ತನ್ನ ಆಪ್ತಮಿತ್ರನೂ, ಎಂದೂ ತನ್ನನ್ನು ಗೇಲಿ ಮಾಡದವನೂ ಆದ ರಾಮಿರೆಡ್ಡಿಯೂ ಕೂಡ ಏನೋ ಮಾತಿಗೆ

ಪಿ. ವಿ. ರಾಮಚಂದ್ರಮೂರ್ತಿ, ಮದರಾಸು



ಮಾತು ಬಂದು ವೈದ್ಯನಾಥನನ್ನು 'ಹೋಗೋ ಲೋ, ಪಿಳ್ಳುಜುಟ್' ಎಂದ. ಮನ ನೋಯು ವಂತಹ ಈ ಮಾತುಗಳು ಮತ್ತೆ ಯಾರಾದರೂ ಹೇಳಿದ್ದರೆ ವೈದ್ಯನಾರ್ಥ ಗಮನಿಸುತ್ತಲೇ ಇರಲಿಲ್ಲ. ಆದರೆ ರೆಡ್ಡಿಯ ಬಾಯಿಯಿಂದ ಇಂತಹ ಮಾತು ಬಂದುವನ್ನು ವೈದ್ಯನಾರ್ಥ ಸಹಿಸದಾದ. ಅದರಿಂದ ಕ್ರಮೇಣ ಅವ ರಿಬ್ಬರ ನಡುವೆ ಜಗಳ ಹತ್ತಿಕೊಂಡಿತು. ವೈದ್ಯನಾರ್ಥ ಬಲವನ್ನೆಲ್ಲಾ ಉಪಯೋಗಿಸಿ ಎರಡು ಗುದ್ದು ಗುದ್ದಿ, ಅಲ್ಲಿ ನಿಲ್ಲದೆ ಓಡಿದ. 'ಸರಿ ಬಿಡೋ, ನೀನೆಲ್ಲಿ ಹೋಗ್ತೀಯಾ? ಇನ್ನೊಂದು ಸಾರಿ ಕಾಣಿಸೊಲ್ಲವೇ? ಆಗ ನಿನ್ನ ಪಿಳ್ಳುಜುಟ್ಟು ಹಾರಿಸಿ ನಿನ್ನ ಕೈಗೆ ಕೊಡದೇಯಿರ್ತೀನೆಯೆ?' ಎಂದು ಸವಾಲು ಹಾಕುತ್ತಾ ರಾಮಿರೆಡ್ಡಿ ಮನೆಗೆ ಹೋದ.

ಇಷ್ಟರಲ್ಲಿ ಶಾಲೆಗೆ ರಜ ಕೊಟ್ಟರು. ತಂದೆ ತಾಯಿಗಳೊಂದಿಗೆ ರಾಮಿರೆಡ್ಡಿ ನೆಂಟರ ಮನೆಗೆ ಪ್ರಯಾಣಮಾಡಿದ. ಅವರು ಬೆಳಗಿನ ಜಾವ ಹೊರಡುವ ಪ್ಯಾಸೆಂಜರು ಗಾಡಿಗೆ ಪ್ರಯಾಣವಿಟ್ಟುಕೊಂಡು, ಸ್ಟೇಷ್ಞ ಸೇರಿ ಕೊಂಡರು. ರೈಲು ಬಂತು. ರಾಮಿರೆಡ್ಡಿ ಸಾಮಾನುಗಳನ್ನಿಡುವ ಹಲಗೆಯೊಂದರ ಮೇಲೆ ಹಾರಿ, ಹಾಸಿಗೆ ಹರಡಿ ಕಾಲು ಚಾಚಿ ಕೊಂಡು ಠೀವಿಯಿಂದ ಮಲಗಿದ. ಸ್ವಲ್ಪ ಹೊತ್ತಿಗೆಲ್ಲಾ ಅವನಿಗೆ ಗಾಢನಿದ್ರೆ ಬಂತು.

ಆ ನಿದ್ದೆಯಲ್ಲೇ ರಾಮಿರೆಡ್ಡಿ ಹಠಾತ್ತನೆ ಎದ್ದು ಕುಳಿತು, ಕೈಗೆ ಸಿಕ್ಕಿದ ರೈಲು ನಿಲ್ಲಿಸುವ ಸರಪಳಿಯನ್ನು ಕೈಯಿಂದ ಹಿಡಿದುಕೊಂಡು "ಈ ಸಾರಿ ಎಲ್ಲಿಗೆ ಹೋಗ್ತೀಯೋ ಭಡವಾ, ಇರು ನಿನ್ನ ಜುಟ್ಟು ಹಾರಿಸಿ ಕೈಗೆ ಕೊಡ್ತೇನೆ" ಎಂದು ಹಲ್ಲು ಕಟಕಟ ಅಂತ ಕಡಿದ.

ಅವನು ಈ ರೀತಿ ಸರಪಳಿ ಹಿಡಿದು ಕೊಂಡು ಎಳೆದಕೂಡಲೇ ರೈಲು ಗಾಡಿ ತಟಕ್ಕನೆ ನಿಂತುಬಿಟ್ಟಿತು. ರಾಮಿರೆಡ್ಡಿಯ ಮಾತು, ನಡತೆ ಯಾರಿಗೂ ಅರ್ಥವಾಗಲಿಲ್ಲ. ಇಷ್ಟರಲ್ಲಿ ಗಾರ್ಡು, ಡ್ರೈವರೂ, ಪೋಲಿಸಿನವರೂ ಮತ್ತು ಕೆಲವು ರೈಲ್ವೇ ಅಧಿಕಾರಿಗಳೂ ಓಡಿ ಬಂದು ಆ ಪೆಟ್ಟಿಯಲ್ಲಿ ಹತ್ತಿದರು. "ಯಾರು ಸರಪಣಿ ಎಳೆದಿದ್ದು?" ಎಂದು ಅವರನ್ನು ಪ್ರಶ್ನೆ ಮಾಡಲು ಏನೂ ಹೇಳಲೂ ತೋರದೆ ರಾಮಿರೆಡ್ಡಿಯ ತಂದೆ ತಾಯಿಗಳು ಭೀತಿಗೊಂಡು ತಲ್ಲಣಿಸಿದರು.



ಆಗಲೂ ಸರಪಣಿ ಹಿಡಿದುಕೊಂಡು ಕುಳಿತಿದ್ದ ರಾಮಿರೆಡ್ಡಿ ಈ ಗೊಂದಲ ಕೇಳಿ ಎಚ್ಚರವಾಗಿ "ಅಪ್ಪಾ. ಅಪ್ಪಾ ಇದು ಯಾವ ಸ್ಟೇಷನ್" ಎಂದು ಕೇಳಿದ. ರೆಡ್ಡಿಯ ತಂದೆಯವರಿಗೆ ಮಗನ ಮಾತು ಅರ್ಥವಾಗಲೇ ಇಲ್ಲ, "ಯಾಕೇ ಮಗು, ಆ ಸರಪಣಿ ಹಿಡಿದು ಎಳೆದೆ. ನಿನ್ನ ಮಾತೇನು? ಏನಾದರೂ ಕನಸು ಕಂಡೆಯೇನೋ?" ಎಂದು ಕೇಳಿದರು.

ರಾಮಿರೆಡ್ಡಿ ತನ್ನ ಕೈಯಲ್ಲಿ ಹಿಡಿದಿರುವುದು ವೈದ್ಯನಾಥನ ಜುಟ್ಟು ಅಂತ ತಿಳಿದುಕೊಂಡಿದ್ದನೇ ಹೊರತು, ಅದು ರೈಲು ಗಾಡಿಯನ್ನು ನಿಲ್ಲಿಸುವ ಸರಪಣಿ ಎಂದು ಅವನಿಗೇ ತಿಳಿಯದು. ಸ್ವಲ್ಪಹೊತ್ತಿಗೆ ಅವನು ಚೇತರಿಸಿಕೊಂಡು ಹುಷಾರಾದ ತರುವಾಯ ತಂದೆ ತಾಯಿಗಳು ಮೆತ್ತಗೆ ನಡೆದ ಸಂಗತಿಯನ್ನು ಕೇಳಿದರು. ತನಗಾದ ಕನಸನ್ನು ರಾಮಿರೆಡ್ಡಿ ಮಣಿ ಪೋಣಿಸಿದಂತೆ ಈ ರೀತಿ ಹೇಳಿದ. "ಅಮ್ಮಾ ಅಮ್ಮಾ, ಹರಿಹರ ಅಯ್ಯರ್ ಮಗ ವೈದ್ಯನಾಥನಿಗೂ ನನಗೂ ಜಗಳವಾಯಿತು. 'ಹೋಗೋಲೋ ಪಿಳ್ಳುಜುಟ್' ಅಂತ ಅಂದೆ. ಅವನು ಸಿಡುಕುಗೊಂಡು ನನಗೆರಡು ಗುದ್ದು ಕೊಟ್ಟು ಓಡಿಬಿಟ್ಟ. ಈಗ ಅವನು ನನಗೆ ಕನಸಿನಲ್ಲಿ ಕಾಣಿಸಿದ. ಅವನ ಜುಟ್ಟು ನನ್ನ ಕೈಯ್ಯಲ್ಲಿ ಸಿಕ್ಕಿಕೊಂಡಿತು. ಇಂತಹ ಸಮಯದಲ್ಲಿ ಜುಟ್ಟು ಕಿತ್ತು ಅವನ ಕೈಯಲ್ಲಿಡೋದು ಬಿಟ್ಟು ಸುಮ್ಮನಿರುವುದೇ?" ಎಂದ.



ಈ ಕಥೆ ಕೇಳಿ ಅಲ್ಲಿಗೆ ಬಂದ ಅಧಿಕಾರಿಗಳೂ, ಅಲ್ಲಿಯೇ ಇದ್ದ ಪ್ರಯಾಣಿಕರೂ ಘೊಳ್ಳನೆ ನಕ್ಕುಬಿಟ್ಟರು.

ಆಗ ಗಾರ್ಡು ರಾಮಿರೆಡ್ಡಿಯನ್ನು ಸರಿಯಾಗಿ ಕುಳಿತುಕೊಳ್ಳುವಂತೆ ಹೇಳಿ ಅವನ ಫೋಟೋ ತೆಗೆಯಲು ಸಿದ್ಧನಾದ. "ಇದೇಕಪ್ಪಾ' ಅಂತ ಅವನ ತಂದೆ ತಾಯಿಗಳು ಬೆದರಿದರು. ಫೋಟೋ ತೆಗೆದ ತರುವಾಯ ಗಾರ್ಡ್ ಹೀಗೆ ಹೇಳಿದ. 'ಇಂದು ನಾವೆಲ್ಲಾ ಅದೃಷ್ಟವಂತರು. ಗಾಡಿ ಇನ್ನೊಂದು ಇಪ್ಪತ್ತು ಗಜ ದೂರ ಹೋಗಿದ್ದರೆ ಉರುಳಿ ನಮಗೆಲ್ಲಾ ಪ್ರಮಾದ ಸಂಭವಿಸುತಿತ್ತು. ಯಾರೋ ಪುಂಡರು ಅಲ್ಲಿದ್ದ ಕಂಬಿಗಳನ್ನು ಕಿತ್ತು ಹಾಕಿ ಓಡಿಬಿಟ್ಟಿದ್ದಾರೆ. ಕಾರಣವೇನೇ ಇರಲಿ, ಸರಪಣಿ ಎಳೆದು ನಿಮ್ಮ ಹುಡುಗ ರಾಮಿರೆಡ್ಡಿ ದೊಡ್ಡ



ಗಂಡಾಂತರವೊಂದನ್ನು ತಪ್ಪಿಸಿದ. ಅವನಿಗೆ ಕೆನಸಾಗುವುದೂ, ಈಪರಿ ದುರಂತದಿಂದ ಪಾರಾಗುವುದೂ, ಎಲ್ಲಾ ಆ ದೇವರ ಸಂಕಲ್ಪ. ಪರಮೇಶ್ವರನ ಲೀಲೆ ಅತ್ಯದ್ಭುತವಾದುದು. ನನಗ ಅರ್ಥ ಆಗೋಲ್ಲ. ಈ ಕಾರಣವಿಲ್ಲದಿದ್ದರೆ ಗಾಡಿ ನಿಲ್ಲಿಸಿದ್ದಕ್ಕೆ ಕಾನೂನಿನಪ್ರಕಾರ ಐವತ್ತು ರೂಪಾಯಿ ಜುಲ್ಮಾನೆ ವಿಧಿಸುತ್ತಿದ್ದರು. ಆದರೆ ಈ ಸಮಯದಲ್ಲಿ ರಾಮಿರೆಡ್ಡಿಯಿಂದ ನನಗೆ ಆದ ಉಪಕಾರಕ್ಕೆ ಅವನಿಗೆ ಎರಡು ಐವತ್ತು ವತ್ತೆ ಮೇಲೆ ಒಂದು ಹದಿನಾರು ಎಂದರೆ ಎಲ್ಲಾ ನೂರ ಹದಿನಾರು ರೂಪಾಯಿ ಬಹುಮಾನ ಕೊಡುತ್ತೇವೆ. ಅಷ್ಟೇ ಅಲ್ಲ. 'ಪ್ರಾಣಭಿಕ್ಷೆ ನೀಡಿದ ಬಾಲಕ' ಎಂಬ ಶೀರ್ಷಿಕೆಯಲ್ಲಿ ಅವನ ಫೋಟೋ ಈಗಲೇ ಎಲ್ಲ ಪತ್ರಿಕೆಗಳಿಗೂ ಕಳುಹಿಸುವೆನು" ಎಂದು ಹೇಳಿದ. ಕೂಡಲೇ ಅಲ್ಲಿದ್ದ ಪ್ರಯಾಣಿಕರೆಲ್ಲರೂ 'ಅಪ್ಪಾ, ಅಣ್ಣಾ ನನ್ನ ಮುದ್ದು ಕಂದ' ಎಂದು ರಾಮಿರೆಡ್ಡಿಯನ್ನು ಅಪ್ಪಿ, ಮುದ್ದಾಡಿದರು. ಮರುದಿನ ರಾಮಿರೆಡ್ಡಿಯ ಕಥೆ ಫೋಟೋ ಸಹಿತ ಎಲ್ಲ ಪತ್ರಿಕೆಗಳಲ್ಲಿ ದಪ್ಪ ದಪ್ಪ ಅಕ್ಷರಗಳಲ್ಲಿ ಪ್ರಕಟವಾಯಿತು.

ರಜ ಮುಗಿದ ಕೂಡಲೇ ರಾಮಿರೆಡ್ಡಿ ಸ್ಕೂಲಿಗೆ ಬಂದ. ಈ ಮೊದಲೇ ನಡೆದ ಸಂಗತಿಯನ್ನು ಪತ್ರಿಕೆಗಳಲ್ಲಿ ನೋಡಿದ್ದರಿಂದ ಶಾಲೆಯ ಉಪಾಧ್ಯಾಯರೂ ಹುಡುಗರೂ ರೆಡ್ಡಿಯ ಸುತ್ತ ನೆರೆದರು. ಅವನ ಅದೃಷ್ಟವನ್ನು ಅನೇಕ ವಿಧವಾಗಿ ಕೊಂಡಾಡಿದರು. ಇಷ್ಟರಲ್ಲಿ ವೈದ್ಯನಾಥ ಬಂದು 'ಲೋ ರೆಡ್ಡಿ, ನಿನಗೆ ಕೋಪ ಉಂಟುಮಾಡಿದ್ದೂ, ಕನಸಿನಲ್ಲಿ ಪ್ರತ್ಯಕ್ಷವಾದದ್ದೂ, ಕೊನೆಗೆ ನಿನ್ನ ಕೀರ್ತಿಗೆ ಕಾರಣವಾದುದೂ ನನ್ನ ಪಿಳ್ಳು ಜುಟ್ಟು ಅಲ್ಲವೇನೋ? ಮತ್ತೆ ನನ್ನ ಫೋಟೋ ಹಾಕದೆ, ನಿಂದು ಏಕೆ ಹಾಕಿದರೋ ಪೇಪರಿನಲ್ಲಿ?' ಎಂದ ನಗುತ್ತಾ. ಆತನೊಂದಿಗೆ ಎಲ್ಲರೂ ನಕ್ಕರು.

ಪಾಠ ಮುಗಿದ ಕೂಡಲೇ ರೆಡ್ಡಿ, ವೈದ್ಯನಾಥರಿಬ್ಬರೂ ಕೈಕೈ ಹಿಡಿದುಕೊಂಡು ಆಟವಾಡಲು ಓಡಿದರು.






8

[ಪುಣ್ಯವಿಶೇಷದಿಂದ ನಮ್ಮ ಅವಳಿಮಕ್ಕಳಿಗೆ ಮಾನುಾಲು ದೃಷ್ಟಿಶಕ್ತಿ ಬರುವುದೇ ಅಲ್ಲದೇ ವಿಚಿತ್ರವಾದ ಅಂಜನ, ಭಸ್ಮ ಮತ್ತು, ಮಾಯಾವಸ್ತ್ರ ಪಡೆಯುವುದನ್ನೂ, ಮತ್ತು ಅವುಗಳನ್ನು ತೆಗೆದುಕೊಂಡು ಅವರು ರಾಜಕುಮಾರಿಯರನ್ನು ಹುಡುಕುತ್ತಾ ಮುಂದೆ ಹೋಗುತ್ತಿರಲು ಮೊದಲು ಹೋಗುತ್ತಿದ್ದ ಉದಯನ ಹಠಾತ್ತನೆ ಮಾಯವಾಗುವುದನ್ನೂ ನೀವಿದುವರೆವಿಗೆ ಓದಿರುವಿರಿ.]

ಯಾವಾಗ ಉದಯನನು ಹಠಾತ್ತನೆ ಮಾಯವಾದನೋ ಆಗ ಸಂಧ್ಯಾ ನಿಶೀಥರು ತಮ್ಮ ಕುದುರೆಗಳ ಲಗಾಮನ್ನು ಎಳೆದು ಹಿಡಿದು ವೇಗವನ್ನು ಕಡಿಮೆ ಮಾಡಿ ಮೆಲ್ಲನೆ ಮುಂದುವರಿದರು. ಸ್ವಲ್ಪದೂರ ಹೋಗುವಲ್ಲಿ ಭವನದ ಮುಂದೆ ಒಂದು ದೊಡ್ಡ ಕಂದಕ ಕಾಣಿಸಿತು. ತಮ್ಮ ಸಹೋದರನು ಕುದುರೆಯೊಂದಿಗೆ ಅದರಲ್ಲಿ ಬಿದ್ದು ಹೋಗಿರಬಹುದೆಂದು ಸಂಧ್ಯಾ ನಿಶೀಥರು ಊಹಿಸಿದರು. ಆದರೆ ಬಹಳ ಆಳವಾಗಿರುವ ಆ ಕಂದಕದಲ್ಲಿ ಉದಯನನ ಸುಳಿವಾಗಲೀ, ಆತನ ಕುದುರೆಯ ಜಾಡಾಗಲೀ ತಿಳಿಯಲಿಲ್ಲ. ಅವರಿಗೆ ಏನೂ ತೋರದಾಯಿತು. ಭವನವನ್ನು ಪ್ರವೇಶಮಾಡೋಣವೆಂದರೆ ಕಂದಕವನ್ನು ದಾಟುವುದು ಹೇಗೆ? ಅದರ ಅಗಲ ಅಷ್ಟಿಷ್ಟಲ್ಲ. ಕಂದಕಕ್ಕೆ ಮೊದಲು ಯಾವುದೋ ಕೊನೆ ಯಾವುದೋ ಕಂಡುಹಿಡಿದಪಕ್ಷದಲ್ಲಿ, ಭವನವನ್ನು ಕಷ್ಟವಿಲ್ಲದೆ ಪ್ರವೇಶಿಸಬಹುದೆಂದೆಣಿಸಿದರು. ಈ ಉದ್ದೇಶದಿಂದ ಅವರು ಕುದುರೆಗಳನ್ನು ನಡೆಯಿಸಿಕೊಂಡು ಕಂದಕದ ಅಂಚಿನಲ್ಲಿಯೇ ಹೆಜ್ಜೆ ಹಾಕುತ್ತಿದ್ದರು. ಆದರೆ ಎಷ್ಟು ದೂರ ಸಾಗಿದರೂ ಆ ಕಂದಕಕ್ಕೆ ಆದಿ ಅಂತ್ಯಗಳಿಲ್ಲವೆಂದೂ, ಭವನವನ್ನು ಯಾರೂ ಪ್ರವೇಶಿಸದಂತಿರುವ ಸಲುವಾಗಿಯೇ ಈ ಕಂದಕವನ್ನು ಮಾಡಿರುವರೆಂದೂ ಅವರು ಗ್ರಹಿಸಿದರು.



ಅವರಿಗೆ ಭವನವನ್ನು ಪ್ರವೇಶಿಸುವ ಮಾರ್ಗ ಹೊಳೆಯಲೇ ಇಲ್ಲ.

ಸ್ವಲ್ಪಹೊತ್ತು ತೀವ್ರವಾಗಿ ಆಲೋಚಿಸಿದ ಮೇಲೆ ಸಂಧ್ಯನು ಹೀಗೆ ಹೇಳಿದ. "ಅಣ್ಣಾ, ಹೇಗಾದರೂ ನಾವು ಈ ಕಂದಕವನ್ನು ದಾಟಿಯೇ ತೀರಬೇಕು. ಕುದುರೆಯನ್ನು ದೌಡಾಯಿಸಿಕೊಂಡು ಬಂದು ಒಂದುಸಾರಿ ಹಾರೋಣ. ದಾಟಿದೆವೋ ಅದೃಷ್ಟವಂತರು. ಹಾಗಲ್ಲದೆ ಕಂದಕದಲ್ಲಿ ಬಿದ್ದೆವೋ, ನಮ್ಮ ಉದಯನನಿಗಾಗಿ ಶಕ್ತಿ ಸಾಮರ್ಥ್ಯಗಳನ್ನೆಲ್ಲಾ ವಿನಿಯೋಗಿಸಿ ಹುಡುಕೋಣ" ಎಂದು ಅಣ್ಣನಿಗೆ ಹೇಳಿದನು.

ಇದಕ್ಕೆ ನಿಶೀಥನೂ ಸಹ 'ಭೇಷ್ ಅದೇ ಸರಿ' ಎಂದನು. ಅವರು ಮತ್ತೆ ತಮ್ಮ ಕುದುರೆಗಳನ್ನೇರಿ ಸ್ವಲ್ಪದೂರ ಹಿಂದಕ್ಕೆ ಹೋಗಿ ಶರವೇಗದಿಂದ ಒಂದೇ ಒಂದು ನೆಗೆತಕ್ಕೆ ಕಂದಕವನ್ನು ದಾಟಿದರು. ಅದೃಷ್ಟವಶಾತ್ ಯಾವ ಅಪಾಯವೂ ಇಲ್ಲದೆ ಕಂದಕದ ಆಚೆದಡವನ್ನು ಸೇರಿದರು. ಇದೆಲ್ಲಾ ನಮಗೆ ಮುಂದೆ ಒದಗಬಹುದಾದ ಶುಭಸೂಚನೆ. ಇನ್ನು ಪರವಾಯಿಲ್ಲ. ಕೋಟೆಯಲ್ಲಿ ಹೆಜ್ಜೆಯಿಟ್ಟಂತೆಯೆ!—ಎಂದು ಅಂದುಕೊಂಡು ಸಂತೋಷಪಟ್ಟರು ಅಣ್ಣತಮ್ಮಂದಿರು. ಈ ಸಂತೋಷದಿಂದ ಅವರು ಆ ಭವನವನ್ನೇನೋ ಪ್ರವೇಶಿಸಿದರು. ಆದರೆ ಅಲ್ಲಿ ನೋಡಿದರೆ ಮನುಷ್ಯಸಂಚಾರವೇ ಕಾಣಿಸದು. ಲೆಕ್ಕವಿಲ್ಲದಷ್ಟು ದ್ವಾರಗಳಿವೆ. ಆದರೆ ಅವೊಂದಕ್ಕೂ ಬಾಗಿಲುಗಳಿಲ್ಲ. ಅವರು ಒಂದೊಂದೇ ದ್ವಾರವನ್ನು ದಾಟಿಕೊಂಡು ಹೋಗುತ್ತಿರುವಾಗ ಪ್ರತಿದ್ವಾರದಲ್ಲೂ ಇಕ್ಕಡೆಗಳಲ್ಲಿ ಮಾನವರ ಶಿಲಾವಿಗ್ರಹಗಳು ಕಾಣಿಸಿದವು.

ಕೊನೆಗೆ ಒಂದು ದೊಡ್ಡ ದ್ವಾರವನ್ನು ತಲುಪಿದರು. ಅದು ನಿಜವಾಗಿ ದ್ವಾರವೇ ಅಲ್ಲ. ಭೀಕರ ರಾಕ್ಷಸನೊಬ್ಬನು ಈ ಆಕಾರದಲ್ಲಿ ಆಕಾಶದಷ್ಟು ಎತ್ತರವಾಗಿ ನಿಂತು ನಿದ್ರೆ ಮಾಡುತ್ತಿರುವನು. ಅವನ ಕಾಲುಗಳ ನಡುವೆಯಿರುವ ಖಾಲಿ ಸ್ಥಳವೇ ದ್ವಾರದಂತೆ ಕಾಣುತ್ತಿದೆ. ಈ ರಾಕ್ಷಸನ ಎಡ ಬಲ ಗಡೆಗಳಲ್ಲಿ ಎರಡು ಸಿಂಹದ ಪ್ರತಿಮೆಗಳಿವೆ. ಇವುಗಳೆಲ್ಲಾ ದೂರದಿಂದ ಕಲ್ಲು ಪ್ರತಿಮೆಗಳಂತೆ ಕಂಡರೂ, ಹತ್ತಿರ ಬಂದಾಗ ಅವು ಜೀವಕಳೆಯಿಂದೊಡಗೂಡಿ, ಮೇಲೆ ಹಾರುವೆವೆನ್ನುವಂತೆ ಭೀಕ



ರವಾಗಿ ಕಾಣಬರಲು ಸಹೋದರರಿಬ್ಬರೂ ತಮ್ಮಗತಿ ಇನ್ನು ಮುಗಿಯಿತೆಂದು ಒಂದೇ ಸಾರಿ ಕಿಟ್ಟನೆಕಿರಿಚಿದರು. ಈ ಕೂಗು ಕಿವಿಗೆ ಬಿದ್ದಕೂಡಲೇ ರಾಕ್ಷಸನಿಗೆ ಎಚ್ಚರ ವಾಯಿತು. ಲೀಲಾಜಾಲವಾಗಿ ಸಂಧ್ಯಾ ನಿಶೀಥರನ್ನು ತನ್ನ ಮುಷ್ಟಿಯಲ್ಲಿ ತೆಗೆದು ಕೊಂಡು "ಭೇಷ್ ಭೇಷ್,ಮತ್ತೆರಡು ವಿಗ್ರಹಗಳು" ಎಂದು ಉತ್ಸಾಹದಿಂದ ಕೂಗಾಡಿದನು. ಅವನು ಈ ಮಾತುಗಳನ್ನು ಆಡಿದ ಕೂಡಲೇ ಸಂಧ್ಯಾ ನಿಶೀಥರು ಭವನದಲ್ಲಿ ತಮಗೆ ಕಂಡು ಬಂದ ವಿಗ್ರಹಗಳೆಲ್ಲವೂ ಯಾವುದೋ ಮಾಯೆಯಿಂದ ಉಂಟಾದುವೆಂದು ಊಹಿಸಿದರು.

ಇದ್ದಕ್ಕಿದ್ದಂತೆಯೇ ಹೀಗೆ ಸಿಕ್ಕಿಕೊಂಡಿದಕ್ಕೆ ಸಂಧ್ಯಾ ನಿಶೀಥರು ವ್ಯಾಕುಲದಿಂದ ಚಿಂತಿಸಿದರು. ಆದರೆ ಅವರು ಈರೀತಿ ಚಿಂತಿಸಿ ಮಾಡುವುದಾದರೂ ಏನಿದೆ?

ಇಂತಹ ಪರಿಸ್ಥಿತಿಗಳು ತಮ್ಮ ಜೀವನದಲ್ಲಿ ಎಷ್ಟೋ ಸಂಭವಿಸುತ್ತವೆ. ಬಿಕ್ಕಟ್ಟಿನಲ್ಲಿ ಬುದ್ಧಿಚಾತುರ್ಯದಿಂದ ತಪ್ಪಿಸಿಕೊಂಡು ಹೊರಬೀಳುವುದರಲ್ಲಿದೆ ಮಾನವನ ಸಾಮರ್ಥ್ಯ.—ಹೀಗೆಂದು ಅವರು ಧೈರ್ಯ ತಂದುಕೊಂಡರು. 'ಮರಣವಾದರೂ ಬರುವುದು ಒಂದೇ ಸಲವಲ್ಲವೆ ?ಎಷ್ಟುಸಲ ಬಂದೀತು? ಅದಕ್ಕೂ ಕಾಲವಿಲ್ಲವೇ? ಧೈರ್ಯವೂ ಯುಕ್ತಿಯೂ ಇದ್ದಲ್ಲಿ ಇದೇನೂ ದೊಡ್ಡವಿಪತ್ತಲ್ಲ. ಏನಾದರಾಗಲಿ, ಒಂದು ಯುಕ್ತಿ ಹೂಡಿ ನೋಡುತ್ತೇನೆ' ಎಂದುಕೊಂಡ ಕುಶಾಗ್ರ ಬುದ್ಧಿಯಾದ ನಿಶೀಥ.

ಹಾಗೆಂದು ಯೋಚಿಸಿ, ನಿಶೀಥನು ರಾಕ್ಷಸನ ಎದುರಾಗಿ ನಿಂತು "ಏನಯ್ಯಾ, ನಾವು ಯಾರೆಂದು ತಿಳಿದಿರುವೆ? ನಾವೇನೂ ಇಲ್ಲಿಗೆ ಕಳ್ಳತನದಿಂದ ಬಂದಿಲ್ಲ. ಇಲ್ಲಿಗೆ ನಾಲ್ಕುಗಾವುದ ದೂರದಲ್ಲಿನ ಕಾಡಿನಲ್ಲಿರುವ ಗಡ್ಡದ ಆಸಾಮಿ ನಿನಗೆ ಒಂದು ಸುದ್ದಿ ಮುಟ್ಟಿಸುವಂತೆ ನಮ್ಮನ್ನು ಕಳುಹಿಸಿದ್ದಾನೆ. ಆದರಿಂದಲೇ...." ಎಂದು ಇನ್ನೂ ಏನೋ ಹೇಳುವಷ್ಟರಲ್ಲಿ ರಾಕ್ಷಸನು ಆತುರದಿಂದ "ಏನು? ಅವನಿನ್ನೂ ಜೀವಿಸಿದ್ದಾನೆಯೆ? ಇಷ್ಟುದಿನ ಅವನು ಬರದೇ ಹೋದುದನ್ನು ಕಂಡು, ಅವನು ಯಾವುದೋ ಪ್ರಮಾದದಿಂದ ಸತ್ತುಹೋಗಿರಬೇಕೆಂದು ಯೋಚಿ

ಸಿದ್ದೆವು. ಸರಿ, ಅವನು ನಿಮ್ಮೊಂದಿಗೆ ಹೇಳಿ ಕಳುಹಿಸಿರುವ ವಿಷಯವಾದರೂ ಏನು? ಬೇಗ ಹೇಳಿ" ಎಂದು ಅವಸರಪಡಿಸಿದನು.

ಆಗ ನಿಶೀಥನು "ಆತನ ಜೀವಕ್ಕೇನು ಮೋಸವಿಲ್ಲ. ಆದರೆ ಆತನ ಜೀವನ ರಹಸ್ಯವನ್ನು ಯಾರೋ ಕಂಡು ಹಿಡಿದುಬಿಟ್ಟರಂತೆ. ಕಂಡು ಹಿಡಿದುದು ಮಾತ್ರವಲ್ಲ. ಆತನ ಹತ್ತಿರವಿದ್ದ ಭಸ್ಮಗಳನ್ನೂ, ಅಂಜನಗಳನ್ನೂ ವಸ್ತ್ರವನ್ನೂ ಸಹ ಕಸಿದುಕೊಂಡಿರುವರಂತೆ. ಅವುಗಳಿಲ್ಲದೆ ತಾನು ಒಂದು ಹೆಜ್ಜೆಯಾದರೂ ಮುಂದಿಡಲಾರನಂತೆ. ಆದ್ದರಿಂದ ಈ ವಿಷಯವನ್ನು ನಿಮಗೆ ತಿಳಿಸಿ, ಮತ್ತೆ ಸ್ವಲ್ಪ ಅಂಜನ ಭಸ್ಮಗಳನ್ನೂ, ಮಾಯಾವಸ್ತ್ರವನ್ನೂ ಸಹ ಕಳುಹಿಸಿ ಕೊಡಬೇಕೆಂದು ಪ್ರಾರ್ಥಿಸುವಂತೆ ಹೇಳಿದ" ಎಂದು ನಂಬಿಕೆ ಹುಟ್ಟುವಂತೆ ಹೇಳಿದನು.

ಎಲ್ಲವನ್ನೂ ಕುತೂಹಲದಿಂದ ಕೇಳಿ ರಾಕ್ಷಸನು "ಹಾಗೇ? ಪಾಪ! ಅದಕ್ಕೆಂತಲೇ ಅವನು ಮತ್ತೆ ಬರಲಾರದೆ ಹೋದ. ಎಷ್ಟೋ ಮೇಲು, ಆ ದುರಾತ್ಮರು ಯಾಕೋ ಅವನ ಹಾರವನ್ನು ಲಪಟಾಯಿಸಲಿಲ್ಲವಲ್ಲಾ ಅದೇನಾದರೂ ಸಂಭವಿಸಿದ್ದರೆ ಅವನನ್ನು ಕಾಪಾಡಲು ಯಾರಿಂದಲೂ ಸಾಧ್ಯವಾಗುತ್ತಿರಲಿಲ್ಲ. ಸರಿ, ಇನ್ನು ನಾನು ಹೋಗಿ ಬರುತ್ತೇನೆ. ನೀವು ಮಾತ್ರ ಒಂದು ಹುಳುವೂ ಸಹ ಒಳಗೆ ಬರದಂತೆ ಜಾಗರೂಕತೆಯಿಂದ ನೋಡುತ್ತಿರಿ" ಎಂದುಹೇಳಿ ಭೂಮಿ ನಡುಗುವ ರೀತಿಯಲ್ಲಿ ಧಾವುಗಾಲು ಹಾಕುತ್ತಾ ಹೊರಟು ಹೋದನು.




ರಾಕ್ಷಸನು ಹೋದದ್ದೇ ತಡ, ಸಂಧ್ಯಾ ನಿಶೀಥರು ಕುಣಿದು ಕುಪ್ಪಳಿಸಿದರು. ರಾಕ್ಷಸನಿಗೂ ಸಹ ಟೋಪಿ ಹಾಕಿದೆವಲ್ಲಾ ಎಂದು ಆನಂದದಿಂದ ಉಬ್ಬಿಹೋದರು. ಇಷ್ಟರಲ್ಲಿ ನಿಶೀಥನು "ಇನ್ನು ಒಂದು ನಿಮಿಷವಾದರೂ ನಾವು ತಡಮಾಡಕೂಡದು. ಅವನು ಹಿಂತಿರುಗಿ ಬರುವಷ್ಟರಲ್ಲಿ ಈ ಭವನದ ರಹಸ್ಯವನ್ನು ಕಂಡುಹಿಡಿಯೋಣ" ಎಂದು ಎಚ್ಚರಿಸಿದನು.

ಅಣ್ಣತಮ್ಮಂದಿರು ಮುಂದಕ್ಕೆ ನಡೆದರು. ಮತ್ತೆ ಕೆಲವು ಬಾಗಿಲುಗಳನ್ನು ದಾಟಿ, ಕೊನೆಯ ದ್ವಾರವನ್ನೂ ಸಹ ದಾಟಿದರು. ಅವರಿಗೆ ಅಲ್ಲಿ ಒಂದು ದೊಡ್ಡ ಕೊಳ ಕಾಣಿ




ಸಿತು. ಅದರಲ್ಲಿ ಅಂದವಾಗಿರುವ ಬಿಳಿಯ ಹಂಸಗಳು ಈಜಾಡುತ್ತಿದ್ದವು.

ಬೆಳಗ್ಗೆಯೇ ಹೊರಟು ದಣಿದಿದ್ದ ಆ ಸಹೋದರರಿಗೆ ಬಹಳ ಬಾಯಾರಿಕೆ ಆಯಿತು. ಬಾಯಾರಿಕೆಯನ್ನು ಶಮನಮಾಡಿ ಕೊಳ್ಳೋಣವೆಂದು ಸಂಧ್ಯ ಕೊಳದಲ್ಲಿ ಇಳಿದು ಒಂದು ಬೊಗಸೆ ನೀರು ಕುಡಿದನು. ಆದರೆ ಆ ನೀರು ಗಂಟಲಲ್ಲಿ ಇಳಿಯಿತೋ ಇಲ್ಲವೋ ಪಾಪ, ಸಂಧ್ಯಾ ಶಿಲಾವಿಗ್ರಹವಾಗಿ ಬದಲಾಯಿಸಿಹೋದನು.

ತನ್ನ ಕಣ್ಣು ಮುಂದೆಯೇ ಸಹೋದರನು ಹೀಗೆ ಶಿಲೆಯಾದುದನ್ನು ಕಂಡು ನಿಶೀಥನೂ ದಿಗ್ಭ್ರಮೆ ಹೊಂದಿ ಪ್ರತಿಮೆಯಂತೆ ನಿಂತು ಬಿಟ್ಟನು. "ಸದ್ಯ ನಾನೂ ಅವಸರದಿಂದ ಕುಡಿದಿದ್ದರೆ ನನ್ನ ಗತಿಯೂ ಇಷ್ಟೇ ಆಗುತಿತ್ತು. ಉದಯನನ ಗತಿ ಏನಾಯಿತೋ ತಿಳಿಯದೆ ಒದ್ದಾಡುತ್ತಿರುವ ಸಮಯದಲ್ಲಿ ಸಂಧ್ಯಾ ಸಹ ಹೀಗಾಗಿಬಿಟ್ಟನಲ್ಲಾ! ನನಗೂ ಯಾವುದಾದರೂ ಆಪತ್ತು ಮೂಡಿತೋ, ನಾವು ಬಂದ ಕೆಲಸವಿರಲಿ,ನಮ್ಮ ವಿಷಯವೇ ಲೋಕಕ್ಕೆ ತಿಳಿಯದೇನೇ ಹೋಗುವುದು" ದೇವರು ದಯಾಮಯ; ನನ್ನನ್ನಾದರೂ ಉಳಿಸಿದ. ಇನ್ನು ನಾನೊಬ್ಬನೇ ಜಾಗರೂಕತೆಯಿಂದ ಇದರಗುಟ್ಟು ಬಯಲುಮಾಡಬೇಕು." ಎಂದು ಎಚ್ಚರ ವಹಿಸಿದನು.

ನಿಶೀಥನು ಮತ್ತೆ ಸ್ವಲ್ಪದೂರ ಹೋಗಲು ಒಂದು ಭಾರಿ ತೋಟ ಕಾಣಿಸಿತು. ಆತೋಟದಲ್ಲಿ ವಿವಿಧ ಫಲವೃಕ್ಷಗಳಿದ್ದುವು. ಎಲ್ಲಕ್ಕಿಂತಲೂ ವಿಚಿತ್ರವಾದುದು ಒಂದು ಮಾವಿನಗಿಡ. ಆ ಗಿಡದಲ್ಲಿರುವ ಕಾಯಿಗಳು ಅಷ್ಟು ಇಷ್ಟು ಅಲ್ಲ. ಎಣಿಸಲಾರದಷ್ಟು, ತುಂಬಿ ಭಾರದಿಂದ ಬಳುಕುತ್ತಿತ್ತು, ಆ ಗಿಡ. ಎಲ್ಲೋ ಕೆಲವು ಕಡೆ ಮಾತ್ರ ಎಲೆಗಳು ಕಾಣಬರುತ್ತಿದ್ದುವು. ಅಷ್ಟು ವಿಶೇಷವಾಗಿ ಬಿಟ್ಟಿತ್ತು ಮಾವಿನ ಹಣ್ಣುಗಳು!

ನಿಶೀಥನಿಗೆ ಈಗ ತುಂಬಾ ಹಸಿವಾಯಿತು. ಗಬಗಬನೆಂದು ಕೆಲವು ಹಣ್ಣುಗಳನ್ನು ಕೊಯ್ದು ಮುಂದೆ ರಾಶಿ ಹಾಕಿಕೊಂಡು ಒಂದು ಹಣ್ಣನ್ನು ತೆಗೆದುಕೊಂಡು ಕಚ್ಚಿ ತಿಂದೊಡನೆಯೇ ಒಂದು ವಿಚಿತ್ರವಾಯಿತು. ಹಣ್ಣು ಕಚ್ಚಿದಕೂಡಲೇ ನಿಶೀಥ ಕೋತಿಯಂತೆ ರೂಪಾಂತರ ಹೊಂದಿದನು. ಕೋತಿಯಾಗಿ ಬದಲಾಯಿಸಿದಕೂಡಲೇ ನಿಶೀಥನು

ಮಿಕ್ಕ ಹಣ್ಣುಗಳನ್ನು ತಿನ್ನದೆ ಅವುಗಳನ್ನು ಅಲ್ಲೇ ಬಿಟ್ಟುಬಿಟ್ಟನು. ಆ ಮಂಗನ ರೂಪದಲ್ಲಿದ್ದ ನಿಶೀಥನು, ಸಂಧ್ಯನು ಶಿಲಾರೂಪವನ್ನು ತಾಳಿದಕೊಳದ ಹತ್ತಿರ ಬಂದು ಸುತ್ತಲೂ ತಿರುಗಾಡುತ್ತಾ ಕಾಲ ಕಳೆಯುತ್ತಿದ್ದನು.

ಇಷ್ಟರಲ್ಲಿ ಕೊಳದಿಂದ ಬುಡಬುಡ ಅಂತ ಶಬ್ದ ಬಂತು. ಮತ್ತೆ ಸ್ವಲ್ಪಹೊತ್ತಿಗೆ ನೀರಿನಿಂದ ಒಂದು ಹಂಸ ತನ್ನಕಡೆ ಬರುವುದು ಕಾಣಿಸಿತು. ಇದೆಲ್ಲವನ್ನು ಕೋತಿಯಾಗಿದ್ದ ನಿಶೀಥ ಎವೆಯಿಕ್ಕದೆ ನೋಡುತ್ತಲೇಇದ್ದ.

ಸ್ವಲ್ಪಹೊತ್ತಿಗೆಲ್ಲಾ ಆ ಹಂಸ ಪೂರ್ತಿಯಾಗಿ ಹೊರಗೆ ಬಂದು ಒಬ್ಬ ಮನುಷ್ಯನಾಗಿ ಬದಲಾಯಿಸಿತು. ನಿಶೀಥ ನೆಗೆದು ಕುಣಿದಾಡಿದನು. ಏಕೆ ಗೊತ್ತೆ? ಆ ಬಂದಾತ ಮತ್ತೆ ಯಾರೂ ಆಗಿರದೆ, ಕಂದಕದಲ್ಲಿ ಬಿದ್ದು ಕಾಣಿಸದೆ ಹೋದ ಸಹೋದರ ಉದಯನನೇ ಆಗಿದ್ದನು.

ಉದಯನ ದಡಕ್ಕೆ ಬಂದಕೂಡಲೇ ಸಂಧ್ಯಾಕುಮಾರನ ಶಿಲಾಪ್ರತಿಮೆಯನ್ನು ಕಂಡು ನಿರ್ಭ್ರಾಂತನಾದನು.

ಇಷ್ಟರಲ್ಲಿ ಮಂಗನರೂಪದಲ್ಲಿದ್ದ ನಿಶೀಥ ಉದಯನನ ಅಂಗಿಯನ್ನು ಹಿಡಿದು ಮುಖ ನೋಡುತ್ತಾ ನಿಂತನು. ಅದು ಸಾಮಾನ್ಯ ಕೋತಿಯೆಂದು ಮೊದಲು ಉದಯನನು ಅದನ್ನು ಕೊಸರಿಕೊಂಡನು. ಆದರೆ ಅದು ಎಡೆಬಿಡದೆ ಕಾಲುಗಳ ಬಳಿ ಸುತ್ತುತ್ತಾ ಏನೇನೋ ಸನ್ನೆ ಮಾಡುವುದನ್ನು ಕಂಡು ಉದಯನನಿಗೆ ತನ್ನ ಸಹೋದರ ನಿಶೀಥನ ನೆನಪು



ಬಂತು. ಆತನೇ ಈ ರೀತಿ ಬದಲಾಯಿಸಿರುವನೇ ಎಂದು ಸಂದೇಹಪಟ್ಟ.

ಇದನ್ನು ಸರಿಪಡಿಸಲು ಏನು ಮಾಡಬೇಕೋ ಉದಯನನಿಗೆ ತಿಳಿಯದಾಯಿತು. ಸಂಧ್ಯಾ ಈರೀತಿ ಶಿಲೆಯಾಗಿ ಏಕೆ ಬದಲಾಯಿಸಿದನೋ, ಕೋತಿರೂಪದಲ್ಲಿರುವುದು ತನ್ನ ಸಹೋದರ ನಿಶೀಥನೋ ಅಲ್ಲವೋ ಹೇಗೆ ತಿಳಿಯುವುದು? ಸ್ವಲ್ಪಸಮಯ ಹಾಗೇ ಯೋಚಿಸಿ ತಟಕ್ಕನೆ ಯಾವುದೋ ಉಪಾಯ ಹೊಳೆದವನಂತೆ ತನ್ನ ಕಿಸೆಯಲ್ಲಿದ್ದ ಭಸ್ಮ ಅಂಜನಗಳನ್ನು ಹೊರಗೆ ತೆಗೆದನು. ಸಂಧ್ಯಾನ ಶಿಲಾವಿಗ್ರಹದ ಮೇಲೆ ಕಪ್ಪುಭಸ್ಮ ಹಾಕಿದನು. ಏನೂ ಆಗಲಿಲ್ಲ. ಹಸಿರು ಅಂಜನ ಬಳಿದು ನೋಡಿದ. ಊಹೂಂ–ಬದಲಾವಣೆಯಿಲ್ಲ. ಕೆಂಪು ಅಂಜನ ಹಚ್ಚಿ ನೋಡಿದ.

ಆಗಲೂ ಶಿಲಾಪ್ರತಿಮೆ ಅದೇ ರೀತಿಯಿತ್ತು. ಎಷ್ಟು ವಿಧದಲ್ಲಿ ಪ್ರಯತ್ನಮಾಡಿದರೂ ಫಲವಾಗದಿರಲು ಉದಯನನು ಆ ಅಂಜನಗಳನ್ನೂ, ಭಸ್ಮಗಳನ್ನೂ ಕೋತಿಯರೂಪದಲ್ಲಿದ್ದ ನಿಶೀಥನಮೇಲೆ ಪ್ರಯೋಗಿಸಿದನು. ಆದರೆ ಈ ಸಾರಿಯೂ ಬದಲಾವಣೆ ಏನೂ ಕಾಣಿಸಲಿಲ್ಲ. ಕೋತಿ ಕೋತಿಯಾಗಿಯೇ ಇತ್ತು.

ಉದಯನನಿಗೆ ಏನು ಮಾಡಬೇಕೋ ಬುದ್ಧಿಗೆ ಹೊಳೆಯದೆ ನದಿತೀರದಲ್ಲಿ ಕುಳಿತುಕೊಂಡು ಆಲೋಚಿಸುತ್ತಿದ್ದನು. ಆಗ ಕೊಳದಲ್ಲಿದ್ದ ಹಂಸಗಳಲ್ಲಿ ಒಂದು ಉದಯನನ ಪಾದಗಳ ಮುಂದೆ ಹಾದುಹೋಗುತಿತ್ತು. ಉದಯನ ತಟಕ್ಕನೆ ಅದನ್ನು ಹಿಡಿದುಕೊಂಡು ಹೊರಕ್ಕೆ ತೆಗೆದನು. ಹೊರಗೆ ಬಂದಕೂಡಲೇ ಆ ಹಂಸ ಒಂದು ಸುಂದರ ಕನ್ಯೆಯಾಗಿ ಬದಲಾವಣೆ ಹೊಂದಿತು.

ಆ ಕನ್ಯೆ ನಾಚಿಕೆಯಿಂದ ತಲೆ ಬಗ್ಗಿಸಿಕೊಂಡು ಮಾತನಾಡದೆ ನಿಂತುಕೊಂಡಳು. "ನೀನು ಯಾರು? ಹೀಗೆ ಹಂಸರೂಪದಲ್ಲಿ ಈ ಕೊಳದಲ್ಲೇಕಿರುವೆ? ಹೇಳಿದರೆ........" ಎಂದು ಇನ್ನೂ ಏನೋ ಹೇಳಹೋಗುವಷ್ಟರಲ್ಲಿ "ಎಲ್ಲಿದ್ದೀರೋ ನೀವು?" ಎಂಬ ಒಂದು ಕರ್ಕಶಕೂಗು ಕೇಳಿಸಿತು. ಈ ಶಬ್ದ ಕೇಳಿಸಿದಕೂಡಲೇ ಆ ಕನ್ಯೆಯು ಒಳಗೆ ಬರುತ್ತಿರುವುದು ಆ ಭವನವನ್ನು ಕಾಯುವ ರಾಕ್ಷಸನೆಂದು ತಿಳಿದು ಉದಯನನೊಂದಿಗೆ "ಅವೆಲ್ಲಾ ಆಮೇಲೆ ಹೇಳುವೆನು. ಮೊದಲು ಈಗ ಪ್ರಾಣಗಳನ್ನು ಕಾಪಾಡಿಕೊಳ್ಳೋಣ" ಎಂದು ಹೇಳಿ, ಸಂಧ್ಯಾಕುಮಾರನ ಶಿಲಾಪ್ರತಿಮೆಯನ್ನೂ, ಪ್ರತಿಮೆಯ ಹತ್ತಿರವಿದ್ದ ಕೋತಿಯನ್ನೂ ಕೊಳದೊಳಕ್ಕೆ ತಳ್ಳಿದಳು. ಕೂಡಲೇ ಅವೆರಡೂ ಎರಡು ಹಂಸಗಳಾಗಿ ಬದಲಾಯಿಸಿದವು. ತರುವಾಯ ಉದಯನನ ಕೈ ಹಿಡಿದುಕೊಂಡು ತಾನೂ ಸಹ ಕೊಳದೊಳಕ್ಕೆ ಧುಮಿಕಿದಳು. ಧುಮಿಕಿದಕೂಡಲೇ ಅವರಿಬ್ಬರೂ ಹಂಸಗಳಾಗಿ ರೂಪಾಂತರ ಹೊಂದಿದರು.

[ ಹಂಸರೂಪದಲ್ಲಿ ಬಂದ ಆ ಕನ್ಯೆ ಯಾರು ? ಈ ಸಹೋದರರು ತಿರುಗಿ ಮೊದಲಿನ ರೂಪಕ್ಕೆ ಬಂದರೆ? ಅಷ್ಟಕ್ಕೂ ಕಾರಣವಾದ ಆ ಮಾಯಾಭವನ ಯಾರದು? ಈ ವಿಚಿತ್ರಗಳನ್ನೆಲ್ಲಾ ಮುಂದಿನ ಸಂಚಿಕೆಯಲ್ಲಿ ಓದಿರಿ. ]






ಒಂದಾನೊಂದು ಅರಣ್ಯದಲ್ಲಿ ಮುನೀಶ್ವರನೊಬ್ಬಾತನು ತಪಸ್ಸು ಮಾಡುತ್ತಿದ್ದ. ಆತನ ಹೆಸರೇನೋ ಯಾರೂ ಅರಿಯರು. ಆದರೆ ಆತನ ಸ್ವಭಾವ, ಗುಣಾತಿಶಯಗಳ ಕಾರಣದಿಂದ ಆತನಿಗೆ ಲೋಕದಲ್ಲಿ ಸತ್ಯಕೇತನೆಂಬ ಹೆಸರು ಅನ್ವರ್ಥನಾಮವಾಯಿತು. ಸತ್ಯಕೇತನಿಗೆ ಸುಳ್ಳು ಹೇಳುವುದಿರಲಿ, ಸುಳ್ಳೆಂದರೇನೆಂಬುದೇ ತಿಳಿಯದು. ಅಷ್ಟೇ ಅಲ್ಲ. ಯಾವ ಪ್ರಾಣಿಯನ್ನೂ ಹಿಂಸೆ ಮಾಡಲೂ ಆತನಿಗೆ ಎಳ್ಳಷ್ಟೂ ಇಷ್ಟವಿರಲಿಲ್ಲ. ಸತ್ಯ, ಅಹಿಂಸೆ, ದಯೆಗಳ ಪ್ರತಿರೂಪವೇ ಆತನಾಗಿದ್ದ. ಅದರಿಂದಲೇ ಟೊಂಗೆಗಳಿಂದ ಹಣ್ಣು ಕಿತ್ತರೆ ಮರಕ್ಕೆ ಎಲ್ಲಿ ನೋವಾಗುವುದೋ ಎಂದು ಕೆಳಗೆ ಉದುರಿ ಬಿದ್ದ ಹಣ್ಣುಗಳನ್ನು ಮಾತ್ರ ಭುಜಿಸುವನು. ಕರುಗಳ ಬಾಯಿಗೆ ಸೊನ್ನೆ ಸುತ್ತುವವನಾಗುವೆನೇನೋ ಎಂದು ಅವು ಹಾಲುಣ್ಣುವಾಗ ಸೋರುವ ನೊರೆ ಮಾತ್ರ ಕುಡಿದು ಜೀವವಿರಿಸಿಕೊಂಡಿದ್ದ. ಅಷ್ಟು ಅಹಿಂಸಾಪರ ಸತ್ಯಕೇತ.

ಒಂದುದಿನ ಸತ್ಯಕೇತ ತನ್ನ ಆಶ್ರಮದಲ್ಲಿ ದರ್ಭಾಸನದ ಮೇಲೆ ಕುಳಿತು, ರುದ್ರಾಕ್ಷಿ ಮಾಲೆಯನ್ನು ಹಿಡಿದು ಜಪ ಮಾಡುತ್ತಿರುವ ಸಮಯದಲ್ಲಿ ಒಂದು ಕಾಡು ಹಂದಿ ಗುರುಗುಟ್ಟುತ್ತಾ ಪ್ರಾಣ ಭಯದಿಂದ ಬೆದರಿ ಓಡಿ ಬಂದು, ಆತನ ಸಮೀಪದಲ್ಲಿದ್ದ ಒಂದು ಪೊದೆಯೊಳಕ್ಕೆ ನುಗ್ಗಿ ಮರೆಸಿಕೊಂಡಿತು. ಅದರ ಶರೀರವೆಲ್ಲಾ ರಕ್ತಮಯವಾಗಿತ್ತು. ಈ ಹಂದಿ ಬೇಟೆಗಾರನ ಬಿಲ್ಲಿನೇಟು ತಿಂದಿರಲೇಬೇಕೆಂದು ಸತ್ಯಕೇತ ಅರಿತುಕೊಂಡ.

'ಪಾಪ, ಒಂದೇಟಿಗೇ ಈ ಕಾಡು ಹಂದಿ ತತ್ತರಿಸಿ ರಕ್ತಪ್ರವಾಹ ಹರಿಸುತ್ತಾ ಓಡಿ ಬಂತು. ಮತ್ತೊಂದು ಏಟು ಎಲ್ಲಿ ಬೀಳುವುದೋ ಎಂದು ಭೀತಿಯಿಂದ ತಲ್ಲಣಿಸಿ ಆಯಾಸಗೊಂಡು ಅದು ಓಡಿ ಬಂದು ತಲೆ ಮರೆಸಿಕೊಂಡಿರಬೇಕು. ಈಗ ಇದನ್ನು ಹೇಗೆ ಕಾಪಾಡಲಿ?' ಎಂದು ಅದರ ರಕ್ಷಣೆಯನ್ನು ಕುರಿತು ಆಲೋಚಿಸತೊಡಗಿದ ಮುನೀಶ್ವರ.

ಇಷ್ಟರಲ್ಲಿ ಅಲ್ಲಿಗೆ ಒಬ್ಬ ಬೇಟೆಗಾರ ಬಂದ. ಕಾಡಿಗೆಯ ಬಣ್ಣದ ಕಪ್ಪು ಶರೀರ ಚ್ಛಾಯೆ, ಕೆಂಡದಂತಹ ಕಣ್ಣು, ಗಿರಲು

ಆರ್. ಕೃಷ್ಣಮೂರ್ತಿ, ಮದರಾಸು



ವಿಶಾಲ, ಧಷ್ಟಪುಷ್ಟನಾಗಿ ನೋಡಲು ಭಯಂಕರವಾಗಿ ಆಜಾನುಬಾಹುವಾಗಿದ್ದ ಆ ಬೇಟೆಗಾರ ಅತಿವಿನಯದಿಂದ ಮುನೀಶ್ವರನಿಗೆ ನಮಸ್ಕಾರಮಾಡಿ "ಸ್ವಾಮಿ, ಇತ್ತ ಕಡೆ ಕಾಡು ಹಂದಿ ಯಾವುದಾದರೂ ಓಡಿ ಬಂದಿತ್ತೇ? ಕಂಡಿದ್ದರೆ ಹೇಳಿ" ಎಂದು ಕೇಳಿದ.

ಮುನೀಶ್ವರನು ಏನೂ ಮಾತನಾಡದಿರಲು ಬೇಟೆಗಾರನು ಮತ್ತೆ "ಮಹಾಸ್ವಾಮಿ, ಬೆಳಿಗ್ಗೆ ಎದ್ದು ಯಾರ ಮುಖ ಕಂಡೆನೋ, ಇಂದು ಅಡವಿಯೆಲ್ಲಾ ಸುತ್ತಾಡಿದರೂ ಒಂದಾದರೂ ಮೃಗ ಕಾಣಿಸಲಿಲ್ಲ. ಬೇಸರವಾಗಿ ಇನ್ನೇನು ಮನೆಗೆ ಹೋಗೋಣ ಎಂದಿರಲು ನನ್ನ ಸುದೈವದಿಂದ ಒಂದು ಹಂದಿ ಕಾಣಿಸಿತು. ಆದರೇನು ಲಾಭ? ಬಿಲ್ಲಿನ ಹೊಡೆತಕ್ಕೆ ಸತ್ತುಬೀಳದೆ, ತಪ್ಪಿಸಿಕೊಂಡು ಇತ್ತ ಕಡೆ ಬಂತು. ಅದನ್ನ ಕೊಂದು ಮಾಂಸ ತೆಗೆದುಕೊಂಡು ಹೋಗಿ ಮಾರಿದರೆ ಮಾತ್ರ ನನ್ನ ಮಡದಿ ಮಕ್ಕಳಿಗೆ ಕವಳ ಸಿಗುತ್ತದೆ. ಇಲ್ಲದಿದ್ದರೆ ಇಲ್ಲ. ಇಂದಿಗೆ ಮೂರು ದಿನಗಳಾದವು. ತಿಂಡಿಯಿಲ್ಲದೆ ನಾವೆಲ್ಲಾ ಉಪವಾಸವಿದ್ದೇವೆ. ಇದು ಸಿಕ್ಕಿದ ಹೊರತು ನಾವು ಇವತ್ತೂ ಸಹ ಹಸಿದ ಹೊಟ್ಟೆಯಿಂದ ಬೇಯಬೇಕಾಗುತ್ತದೆ" ಎಂದು ತನ್ನ ಸಂಸಾರ ತಾಪತ್ರಯವನ್ನು ವಿವರಿಸತೊಡಗಿದ.

ಈವರೆವಿಗೆ ಹಂದಿಯ ಅವಸ್ಥೆ ಕಂಡು ಕನಿಕರಪಡುತ್ತಿದ್ದ ಸತ್ಯಕೇತನಿಗೆ ಬೇಟೆಗಾರನ ಕುಟುಂಬದ ದುರವಸ್ಥೆ ಕಂಡು ಮತ್ತಷ್ಟು ಮರುಕವುಂಟಾಯಿತು. ಮನ ಕರಗಿತು. ಆದರೇನು ಮಾಡಬೇಕೀಗ? ಬೇಟೆಗಾರನು ಹೇಳಿದಪ್ರಕಾರ ಹಸಿವಿನ ಬಾಧೆಯಿಂದ ಆತನೂ, ಆತನ ಮನೆಯವರೂ ಸಾಯುವ ಸ್ಥಿತಿಯಲ್ಲಿರುವರು. ಏನಾದರಾಗಲೀ ಎಂದು ಆ ಹಂದಿಯಿರುವ ಸ್ಥಳವನ್ನು ತೋರಿಸೋಣವೆಂದರೆ, ಶರಣು ಬಂದ ಪ್ರಾಣಿಯ ಜೀವ ತೆಗೆದಂತೆ ಆಗುವುದು. ಹೀಗೆ ಯಾವರೀತಿ ಮಾಡಿದರೂ ಪಾಪ ಅಂಟಿಕೊಳ್ಳುವುದು ತಪ್ಪುವಂತೆ ಕಾಣಿಸುತ್ತಿಲ್ಲ. ಕೇಳಿದವನಿಗೆ ಉತ್ತರ ಕೊಡಬೇಕು. ಸುಮ್ಮನಿರುವಂತೆಯೂ ಇಲ್ಲ. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಗಾಳ ಗಂಟಲಲ್ಲಿ ಬಿದ್ದಂತೆ ಆಯಿತು ಮುನೀಶ್ವರನಿಗೆ.

ಅತ್ತ ಹಂದಿಗಾಗಲೀ, ಇತ್ತ ಮೊರೆಯಿಡು ತ್ತಿರುವ ಬೇಟೆಗಾರನಿಗಾಗಲೀ ಹಿಂಸೆಯುಂಟಾಗುವುದು ಸತ್ಯಕೇತನಿಗೆ ಎಳ್ಳಷ್ಟೂ ಇಷ್ಟವಿಲ್ಲ. ಆತನೇನು ಮಾಡಬೇಕು?

ಆದುದರಿಂದ ದೀರ್ಘಾಲೋಚನೆಮಾಡಿ ನಂತರ "ಅಯ್ಯಾ, ಹಂದಿಯನ್ನು ಕಂಡಿದ್ದರೆ ಹೇಳು ಎಂದೆಯಲ್ಲವೆ? ಆದರೆ ನೋಡುವುದು ನಯನಗಳು. ನೋಡಿದುದನ್ನು ಹೇಳಲು ನಯನಗಳಿಗೆ ಶಕ್ಯವಿಲ್ಲ. ಬಾಯಿಗೆ ಮಾತ್ರ ಹೇಳುವ ಶಕ್ತಿಯಿದೆ. ಆದರೆ ಲಾಭವೇನು? ಬಾಯಿ ನೋಡಲಿಲ್ಲ. ನೋಡದೆ ಯಾವ ಬಾಯಿಯಾದರೂ ಏನು ಹೇಳುತ್ತದೆ?" ಎಂದು ಬೇಟೆಗಾರನಿಗೆ ಜವಾಬು ಕೊಟ್ಟ.

ಇಷ್ಟು ಯುಕ್ತಿಯಿಂದ ಉತ್ತರ ಹೇಳಿದ ಮುನೀಶ್ವರನನ್ನು ಮತ್ತೇನು ಕೇಳಲೂ ಅವಕಾಶವಿರಲಿಲ್ಲ, ಬೇಟೆಗಾರನಿಗೆ. ಅಸತ್ಯ ನುಡಿಯದೆ ಹಂದಿಯ ಪ್ರಾಣವನ್ನು ಕಾಪಾಡಿದ ಸತ್ಯಕೇತನ ಕುಶಾಗ್ರತೆಯನ್ನು ಮೆಚ್ಚಿಕೊಂಡನೋ ಎಂಬಂತೆ ಬಹಳ ಕ್ಷುದ್ಬಾಧೆಯಿಂದ ಬಂದ ಆ ಬೇಟೆಗಾರ ತೃಪ್ತಿಗೊಂಡವನಂತೆ ತೋರಿ ಕಿರುನಗೆಯನ್ನು ಬೀರಿದ. ಮುನಿ ನೋಡುತ್ತಿದ್ದಂತೆಯೇ ಬೇಟೆಗಾರನ ಕಪ್ಪನೆಯ ಶರೀರವೆಲ್ಲಾ ಬಂಗಾರದ ಬಣ್ಣವಾಗಿ ಬದಲಾಯಿಸಿತು. ಆತನ ಕೈಯಲ್ಲಿದ್ದ ಬಿಲ್ಲು ತ್ರಿಶೂಲವಾಯಿತು. ಕೆದರಿದ್ದ ಆತನ ಕೂದಲಿಗೆ ಶಿಖೆ ಏರ್ಪಟ್ಟು, ಆ ಶಿಖೆಯಲ್ಲಿ ಗಂಗಾದೇವಿ, ಚಂದ್ರರು ಕಾಣಿಸಿಕೊಂಡರು.



"ಇನ್ನೇನು ಸಂದೇಹ. ಸಾಕ್ಷಾತ್ ಪರಮೇಶ್ವರನೇ ಈ ರೂಪದಲ್ಲಿ ನನಗೆ ದರ್ಶನವಿತ್ತಿರುವನು. ನನ್ನದೆಂತಹ ಅದೃಷ್ಟ" ಎಂದುಕೊಂಡು ಸತ್ಯಕೇತನು ಆ ದಿವ್ಯ ಸುಂದರಮೂರ್ತಿಗೆ ಸಾಷ್ಟಾಂಗ ನಮಸ್ಕಾರ ಮಾಡಿದ.

ಪರಮೇಶ್ವರನು ಆತನನ್ನು ಕುರಿತು "ಎಲೈ ಸತ್ಯಕೇತನೇ, ನೀನು ಅವಲಂಬಿಸುತ್ತಿರುವ ಅಹಿಂಸಾವ್ರತಕ್ಕೂ, ಅಸತ್ಯವಾಡದಿರುವುದಕ್ಕೂ ನಡುವೆ ಸಂಧಿಗ್ಧವಾದ ಜಟಿಲಪ್ರಶ್ನೆಯೊಂದನ್ನು ಕಲ್ಪಿಸಿದರೆ ಯಾವ ರೀತಿ ಉತ್ತರವೀಯುವೆಯೋ ನೋಡೋಣವೆಂಬ ಸಂಕಲ್ಪದಿಂದ ಈ ಸಮಸ್ಯೆ ಒಡ್ಡಿದೆ. ನಿನ್ನ ಬುದ್ಧಿಚಾತುರ್ಯದಿಂದ ಸತ್ಯ ಮತ್ತು ಅಹಿಂಸಾ

ವ್ರತಗಳನ್ನು ಚೆನ್ನಾಗಿ ಕಾಪಾಡಿಕೊಂಡೆ. ಧರ್ಮವನ್ನು ಉಳಿಸಿಕೊಂಡೆ. ಪರೀಕ್ಷೆಯಲ್ಲಿ ಜಯ ಗಳಿಸಿದೆ" ಎಂದು ತನ್ನ ಅಪಾರ ಸಂತೋಷವನ್ನು ವ್ಯಕ್ತಪಡಿಸಿದನು.

ಅದಕ್ಕೆ ಸತ್ಯಕೇತನು "ದೇವಾ ಎಲ್ಲವೂ ನಿನ್ನ ಅನುಗ್ರಹ" ಎಂದನು.

ಆಗ ಪರಮೇಶ್ವರನು "ಸತ್ಯಕೇತ, ನೀನು ಕಣ್ಣುಗಳಿಂದ ಕಂಡ, ಬಾಯಿಂದ ಹೇಳಲಾರದ ಆ ವರಹಾ ಮೂರ್ತಿ ಯಾರೋ ಗೊತ್ತೇ?" ಎಂದ.

ಹೀಗೆ ಹೇಳುತ್ತಿರುವಲ್ಲಿ ಪೊದೆಯಲ್ಲಿ ಅಡಗಿಕೊಂಡಿದ್ದ ಕಾಡು ಹಂದಿ ಮಾಯವಾಗಿ, ಮುಗುಳುನಗೆ ನಗುತ್ತಾ ಪಾರ್ವತಿದೇವಿ ಮೆಲ್ಲನೆ ಹೊರಟು ಬಂದು ಪರಮೇಶ್ವರನ ಪಕ್ಕದಲ್ಲಿ ನಿಂತುಕೊಂಡಳು.

ಈ ಮಾಯೆಗೆ ತನ್ಮಯನಾಗಿ ಸತ್ಯಕೇತನು ಆ ದಿವ್ಯ ದಂಪತಿಗಳನ್ನು ಪರಿಪರಿವಿಧಗಳಲ್ಲಿ ಸ್ತೋತ್ರಮಾಡಿದನು. ಆಗ ಅವರು ಉಭಯರೂ "ಎಲೈ ಭಕ್ತಾಗ್ರೇಸರ, ಸತ್ಯಕೇತ, ಧರ್ಮರಕ್ಷಣೆ ಮಾಡಿದ ನಿನ್ನ ಜಾಕಚಕ್ಯತೆಗೆ ನಾವು ಸಂತೋಷಗೊಂಡೆವು. ನಿನಗೇನು ವರ ಬೇಕೋ ಕೇಳು?" ಎಂದರು.

ಅದಕ್ಕೆ ಸತ್ಯಕೇತನು "ಪುಣ್ಯದಂಪತಿಗಳೇ ನಿಮ್ಮ ದರ್ಶನ ಭಾಗ್ಯಕ್ಕಿಂತಲೂ ನನಗೆ ಬೇಕಾದುದಾದರೂ ಏನಿದೆ? ಆದರೂ ನೀವು ನನ್ನಮೇಲೆ ಅನುಗ್ರಹವಿಟ್ಟು, ಬೇಡಿಕೊಳ್ಳುವಂತೆ ಆಜ್ಞೆ ಮಾಡಿದಾಗ ಒಲ್ಲೆ ಎನ್ನುವುದು ವಿವೇಕಿಯ ಲಕ್ಷಣವಲ್ಲ. ಆದ್ದರಿಂದ, ಇನ್ನು ಮುಂದೆಯೂ ಸಹ ಈ ಎರಡು ಧರ್ಮಗಳನ್ನು ತಪ್ಪದೆ ಪಾಲಿಸಿಕೊಂಡು ಬರುನಂತಹ ಶಕ್ತಿ ಕೊಟ್ಟರೆ ಅಷ್ಟೇ ನನಗೆಸಾಕು" ಎಂದ.

ಆತನ ಕೋರಿಕೆ ಕೇಳಿ ಅವರು ಹಾಗೇ ಆಗಲೆಂದು ಮುಗುಳುನಗೆ ಬೀರಿದರು. ಇಷ್ಟರಲ್ಲಿ ಒಂದು ಪುಷ್ಪಕವಿಮಾನವು ಭೂಲೋಕಕ್ಕೆ ಇಳಿದು ಬಂದು, ಅವರಿಬ್ಬರನ್ನೂ ಗಗನ ಮಾರ್ಗದಲ್ಲಿ ಕರೆದೊಯ್ದಿತು.

ಅಂದಿನಿಂದ ಸತ್ಯಕೇತನು ಜೀವಿಸಿರುವಷ್ಟು ಕಾಲವೂ ತಾನು ಸತ್ಯ, ಅಹಿಂಸೆಗಳನ್ನು ನೆರವೇರಿಸುತ್ತಿದ್ದುದೇ ಅಲ್ಲದೆ, ತನ್ನ ಆಶ್ರಮದ ಶಿಷ್ಯಕೋಟಿಗೂ ಈ ಸುಗುಣಗಳ ಪ್ರಭಾವವನ್ನು ಬೋಧಿಸಿ, ಕಡೆಯಲ್ಲಿ ಮುಕ್ತಿ ಪಡೆದನು.






ಬಹಳಕಾಲದ ಹಿಂದೆ ರಣಾರ್ಣವನೆಂಬ ಒಬ್ಬರಾಜನಿದ್ದ. ಆತ ತುಂಬಾ ದುಷ್ಟ. ಯಾರ ಮೇಲಾದರೂ ಆತನ ದಯೆ ತಪ್ಪಿತೆಂದರೆ ಮರುಮಾತಿಲ್ಲದೆ ಮರಣಶಿಕ್ಷೆ ವಿಧಿಸುತ್ತಿದ್ದ. ಈ ರೀತಿ ನಿರಪರಾಧಿಗಳು ಅನೇಕರು ಆತನ ಕೈಯಲ್ಲಿ ಸಿಕ್ಕಿ ಪ್ರಾಣಗಳನ್ನು ಕಳೆದುಕೊಳ್ಳುತ್ತಿದ್ದರು. ರಣಾರ್ಣವನ ಆಸ್ಥಾನದಲ್ಲಿ ಸಮಯಜ್ಞ ಅಂತ ಒಬ್ಬ ಜೋತಿಷ್ಕನಿದ್ದ. ರಾಜನು ಯಾವ ಕೆಲಸ ಮಾಡಬೇಕೆಂದರೂ ಮೊದಲು ಸಮಯಜ್ಞನೊಂದಿಗೆ ಸಮಾಲೋಚಿಸುತ್ತಿದ್ದ. ಆದ್ದರಿಂದ ರಾಜನು ಕೇಳಿದ ಪ್ರಶ್ನೆಗೆ ಆತನು ಸರಿಯಾದ ಸಮಾಧಾನ ಕೊಡಬೇಕಿತ್ತು. ಎಂದಾದರೂ ಉತ್ತರ ತಪ್ಪಾಯಿತೆಂದರೆ ದಯೆ ದಾಕ್ಷಿಣ್ಯಗಳಿಲ್ಲದೆ ತನಗೂ ಸಹ ರಾಜನು ಮರಣದಂಡನೆ ವಿಧಿಸುವನೆಂಬ ವಿಷಯ ಸಮಯಜ್ಞನಿಗೆ ಗೊತ್ತು.

ಒಂದಾವರ್ತಿ ರಣಾರ್ಣವನು ನೆರೆಯರಾಜನಾದ ಶೂರಸೇನನ ಮೇಲೆ ದಂಡೆತ್ತಿ ಹೋಗಬೇಕೆಂದು ನಿಶ್ಚಯಿಸಿ "ಎಲೈ ಸಮಯಜ್ಞನೇ, ನಾನು ಒಂದು ಕಾರ್ಯ ಮಾಡಲು ತಲೆ ಹಾಕಿರುವೆನು. ಅದು ಜಯವಾಗುವುದೇ, ಇಲ್ಲವೇ?" ಎಂದು ಪ್ರಶ್ನೆ ಹಾಕಿದ. ಅದಕ್ಕೆ ಸಮಯಜ್ಞ ಮರುಯೋಚನೆಯಿಲ್ಲದೆ "ಆಳುವ ಮಹಾಸ್ವಾಮಿಯವರಿಗೆ ಸದಾ ಜಯವೇ" ಎಂದು ಉತ್ತರಿಸಿದ..

ಇದುವರೆವಿಗೆ ಸಮಯಜ್ಞ ಹೇಳಿದ ಉತ್ತರ ಯಾವುದೂ ತಪ್ಪಾಗಿರಲಿಲ್ಲ. ಆದ್ದರಿಂದ ಈಗಲೂ ಸಹ ಆತನ ಮಾತಿನಂತೆ ತನ್ನ ಉದ್ದೇಶ ಸಫಲವಾಗುವುದೆಂದು ರಣಾರ್ಣವನು ಧೈರ್ಯಗೊಂಡ. ಈ ಧೈರ್ಯದಿಂದ ಆತನು ಶೂರಸೇನನನ್ನು ಎಲ್ಲಿಗಾದರೂ ಕರೆಯಿಸಿಕೊಂಡು, ಭೇಟಿಮಾಡಿ ಸವಿಮಾತುಗಳಾಡುತ್ತಿದ್ದ. ಹೀಗೆ ನಂಬಿಕೆಯನ್ನುಂಟುಮಾಡಿ, ಶೂರಸೇನನನ್ನು ಸೆರೆ ಹಿಡಿಯುವ ಸಂಚು ಹೂಡಿದ ರಣಾರ್ಣವ.

ಆದರೆ ಇಂತಹ ಸಂಚುಗಳನ್ನು ಸುಲಭವಾಗಿ ಕಂಡು ಹಿಡಿಯಬಲ್ಲ ಸೂಕ್ಷ್ಮಮತಿಯೊಬ್ಬ ಶೂರಸೇನ ಮಹಾರಾಜನಿಗೆ ಮಂತ್ರಿಯಾಗಿದ್ದ. ಆತನ ಹೆಸರು ದೂರದರ್ಶಿ. ರಣಾರ್ಣವನ ಕಪಟೋಪಾಯಗಳ ವಿಷಯ

ಡಿ. ಹರಿನಾರಾಯಣ, ಬಳ್ಳಾರಿ



ದೂರದರ್ಶಿಗೆ ಬಹಳ ದಿನಗಳಿಂದ ಗೊತ್ತಿತ್ತು. ಪರಿಸ್ಥಿತಿ ಈ ರೀತಿಯಿರುವಲ್ಲಿ, ತನ್ನ ಧಣಿಯಾದ ಶೂರಸೇನನನ್ನು, ಆ ರಣಾರ್ಣವನು ಪ್ರೀತಿಯನ್ನು ನಟಿಸುತ್ತಾ ಕರೆದ ಮಾತ್ರಕ್ಕೆ ಉಬ್ಬಿ ಹೋಗುವನೇ ? ಈ-ರೀತಿ ಬರುವಂತೆ ಏಕೆ ಆಹ್ವಾನ ಕೊಟ್ಟಿರಬಹುದು' ಎಂದು ತುಂಬಾ ಯೋಚಿಸಿ, ಇದರ ಒಳಗುಟ್ಟನ್ನು ತಿಳಿದುಕೊಂಡು, ದೂರದರ್ಶಿ ತಕ್ಕ ಬಂದೋಬಸ್ತು ಮಾಡಿಕೊಂಡೇ ಇದ್ದ.

ಹೀಗೆ ಒಂದುಸಲ ರಣಾರ್ಣವನು ಶೂರಸೇನನನ್ನು ಸೆರೆ ಹಿಡಿಯಲು ಸಕಲ ಸಿದ್ಧತೆ ಮಾಡಿ ಮಾತುಗಳನ್ನಾಡುತ್ತಾ, ಆತನು ಮೈಮರೆತಾಗ ತನ್ನ ಪರಿವಾರಕ್ಕೆ ಸನ್ನೆಮಾಡಿದ. ಅವರು ಕೂಡಲೇ ಹಿಂದಿನಿಂದ ಬಂದು ಶೂರಸೇನನನ್ನು ಬಂಧಿಸಿದರು.

ಆದರೆ ಮರುಕ್ಷಣದಲ್ಲಿಯೇ ಅನಿರೀಕ್ಷಿತವಾಗಿ ದೂರದರ್ಶಿ ತನ್ನ ಸೈನ್ಯದೊಂದಿಗೆ ಅಲ್ಲಿ ಪ್ರತ್ಯಕ್ಷನಾದ. ಆತನ ಸೈನಿಕರು ರಣಾರ್ಣವನನ್ನೂ, ಅವನ ಪರಿವಾರವನ್ನೂ ಸುತ್ತುಗಟ್ಟಿದರು. ದೂರದರ್ಶಿ ಸಂಜ್ಞೆ ಮಾಡಿದ ಕೂಡಲೇ ಅವರು ರಣಾರ್ಣವನ ಕೈಗಳಿಗೆ ಸಂಕೋಲೆ ತೊಡಿಸಿದರು. ಆತನ ಕಣ್ಣೆದುರಾಗಿಯೇ ತಮ್ಮ ರಾಜನಾದ ಶೂರಸೇನನನ್ನು ಬಿಡುಗಡೆ ಮಾಡಿದರು.

ಮತ್ತೇನೂ ಮಾತನಾಡಲಾರದೆ ರಣಾರ್ಣವ ಕಣ್ಣೀರು ಸುರಿಸಿದ. ದೂರದರ್ಶಿಯ ಕೈಕಾಲು ಹಿಡಿದು ಬೇಡಿಕೊಳ್ಳಲು, ಆತನು ಕನಿಕರಗೊಂಡು, ಮತ್ತೆ ಯಾವಾಗಲೂ ಈ ರೀತಿ ಕುಟಿಲವರ್ತನೆಗೆ ಕೈ ಹಾಕುವುದಿಲ್ಲವೆಂದು ಒಪ್ಪಿಕೊಳ್ಳುವಂತೆ ಕಠಿನವಾದ ಷರತ್ತುಗಳನ್ನು ಹಾಕಿ, ಬುದ್ಧಿ ಹೇಳಿ, ಬಿಡುಗಡೆ ಮಾಡಿದ.

ಜೋತಿಷ್ಕನ ಮಾತು ತಪ್ಪಾದುದರಿಂದಲೂ, ಈ ರೀತಿ ಪರಾಭವವಾದುದರಿಂದಲೂ ರಾಜನು ಕುಪಿತನಾಗಿ ಸಮಯಜ್ಞನಿಗೆ ಶಾಸ್ತಿ ಮಾಡಬೇಕೆಂದು ನಿಶ್ಚಯಿಸಿದ. ಆದಿನ ರಾತ್ರಿ ಜೋತಿಷ್ಕನಿಗೆ ಬರುವಂತೆ ಸುದ್ದಿಕಳುಹಿಸಿದ. ಪರಿಚಾರಕರು ಹೋಗಿ ಸಮಯಜ್ಞನನ್ನು ಕರೆದಕೂಡಲೇ, ಆತನು ಪರಿಸ್ಥಿತಿ ಗ್ರಹಿಸಿ ಅವರನ್ನು "ಅಪ್ಪಾ, ನಮ್ಮ ಪ್ರಭುಗಳು ಹೋದ ಕಾರ್ಯವೇನಾಯಿತು ? " ಎಂದು ಪ್ರಶ್ನೆ ಮಾಡಿದ. ಅವರು ರಾಜನು ಸೋತು, ಪರಾ

ಭವಗೊಂಡ ವಿಷಯವನ್ನು ಮಣಿ ಪೋಣಿಸಿದಂತೆ ಹೇಳಿದರು. ಆಗ ಸಮಯಜ್ಞ ತನ್ನ ಮನಸ್ಸಿನಲ್ಲಿ ಹೀಗೆಂದುಕೊಂಡ.—ರಾಜನ ಆಸ್ಥಾನದಲ್ಲಿ ಕೆಲಸಮಾಡುವುದೇ ಕಷ್ಟಕರವಾದುದು. ಏಕೆಂದರೆ ಪ್ರಭು ಚಿತ್ತ ಯಾವ ಕ್ಷಣ ಹೇಗೆ ಬದಲಾಯಿಸುವುದೋ ಯಾರೂ ಹೇಳಲಾರರು. ಅದರಲ್ಲಿ ದುಷ್ಟನೂ ಮುಂಗೋಪಿಯೂ ಆದ ರಣಾರ್ಣವನಂತಹ ಅರಸನ ಹತ್ತಿರ ಚಾಕರಿಮಾಡುವುದು ನಿತ್ಯಗಂಡಾಂತರ. ಏನೋ ದೇವರ ಕೃಪೆಯಿಂದ ಇಂದಿನವರೆವಿಗೆ ಈ ದುಷ್ಟನ ಹತ್ತಿರ ಕಾಲ ಕಳೆದುಕೊಂಡು ಬಂದೆ. ಇಂದಿಗೆ ಮುಕ್ತಾಯಗೊಂಡಂತೆಯೇ ಸರಿ. ನನ್ನ ಆಯುಷ್ಯ ಮುಕ್ತಾಯವಾದುದರಿಂದಲೇ ಉತ್ತರ ತಪ್ಪಾಯಿತು. ವಿಧಿವಿಲಾಸ ಈ ರೀತಿ ಇದ್ದರೆ ನಾನು ಮಾಡುವುದಾದರೂ ಏನಿದೆ? ಹುಲು ಮನುಜನಾದ ನನ್ನಲ್ಲಿ ಏನಿದೆ? ಈ ಸಮಯದಲ್ಲಿ ಅಧೈರ್ಯಪಟ್ಟು ಹಿಂದೇಟು ಹಾಕಿದರೆ ಲಾಭವೇನೂ ಇಲ್ಲ. ಆಪತ್ತು ಬಂದಾಗ ಗುಂಡಿಗೆ ಗಟ್ಟಿ ಮಾಡಿಕೊಳ್ಳುವುದು ಅಗತ್ಯ. ಆದುದರಿಂದ ರಾಜನ ಹತ್ತಿರಹೋಗುವೆನು. ಅಲ್ಲಿನ ಪರಿಸ್ಥಿತಿ ನೋಡುತ್ತೇನೆ. ಪರಮೇಶ್ವರನು ಸಮಯಕ್ಕೆ ಸೂಚಿಸಿದ ರೀತಿ ಉತ್ತರ ಹೇಳುತ್ತೇನೆ. ಎಲ್ಲಾ ಆ ಜಗನ್ನಾಟಕಸೂತ್ರಧಾರಿಯ ದಯೆ—ಎಂದುಕೊಂಡು ಅರಮನೆಗೆ ಹೊರಟ.

ತನ್ನ ಅಭ್ಯಾಸದಂತೆ ರಾಜನು ಕೋಪ



ವನ್ನು ನುಂಗಿಕೊಂಡು, ಸಮಯಜ್ಞನೊಂದಿಗೆ ಹುಸಿವಿನಯದಿಂದ ಮಾತನಾಡಲು ಪ್ರಾರಂಭಿಸಿದ. ಈ ಕಪಟ ವಿನಯಗಳು ಏಕೆಂದು ಸಮಯಜ್ಞನಿಗೆ ತಿಳಿದೇಯಿದೆ. ಅಷ್ಟೇ ಅಲ್ಲದೆ, ಅಲ್ಲಲ್ಲಿ ತಳವಾರರು ಅವಿತಿಟ್ಟುಕೊಂಡಿರುವುದನ್ನೂ ಕಂಡು ಹಿಡಿದ ಆತ. ಆದರೂ ಭೀತಿ ಹೊಂದಲಿಲ್ಲ.

ಸ್ವಲ್ಪಸಮಯ ಸುದ್ದಿ ಸಮಾಚಾರ ಮಾತನಾಡಿ ರಾಜನು 'ಅಯ್ಯಾ ಜೋತಿಷ್ಕರೇ, ಯಾರು ಯಾರಿಗೋ ತಾವು ಜಾತಕ ಫಲಗಳನ್ನು ಹೇಳಿರುವಿರಿ. ಆದರೆ ನಿಮ್ಮ ಜಾತಕ ಹೇಗಿದೆಯೋ ನೋಡಿದ್ದೀರೇನು ತಾವು?" ಎಂದು ಪ್ರಶ್ನೆ ಮಾಡಿದ. "ನೋಡದೇನು? ನೋಡಿದ್ದೇನೆ ಪ್ರಭುಗಳೇ" ಎಂದು ಜೋತಿಷ್ಕನು ಸ್ವಲ್ಪವಾದರೂ ಹೆದರಿಕೆ ಬೆದರಿಕೆಗ

ಳಿಲ್ಲದೆ ಸ್ಪಷ್ಟವಾಗಿ ನುಡಿದ. "ಹಾಗಾದರೆ ನಿಮ್ಮ ಆಯುಷ್ಯವೆಷ್ಟು" ಎಂದು ಮತ್ತೆ ಕೇಳಿದ ರಾಜ.

ಒಂದುವೇಳೆ ಹತ್ತೋ ಇಪ್ಪತ್ತೋ ವರ್ಷ ಅಂತ ಸಮಯಜ್ಞ ಹೇಳಿದರೆ ಕತ್ತಿಸಮೇಲೆ ಕತ್ತಿ ಹಿಡಿದು' ಈ ಕೂಡಲೇ ನಿನ್ನನ್ನು ತುಂಡರಿಸಿದರೆ ನಿನ್ನ ಜೋತಿಷ್ಯ ಸುಳ್ಳು ಅಂತ ಆಯಿತಲ್ಲವೇ? ನಿನ್ನ ವಿಷಯವೇ ಸರಿಯಾಗಿ ತಿಳಿದುಕೊಳ್ಳಲಾರದ ನೀನು ಬೇರೆಯವರಿಗೆ ಭವಿಷ್ಯ ಹೇಳುವುದೇನು ಬಂತು, ಪೆದ್ದ' ಎಂದು ಹೇಳಬಹುದು. ಅಲ್ಲವೇ? ಆದರೆ ಅಷ್ಟುಮಾತ್ರಕ್ಕೆ ಬಗ್ಗುವನೇ ಬುದ್ಧಿಕುಶಲತೆಯುಳ್ಳ ಸಮಯಜ್ಞ.

ಒಂದು ಐದು ನಿಮಿಷ ದೀರ್ಘವಾಗಿ ಆಲೋಚನೆ ಮಾಡಿದಂತೆ ನಟಿಸಿ "ಪ್ರಭುವೇ ಜೋತಿಷ್ಯಶಾಸ್ತ್ರಕ್ಕೆ ಪಾರ್ವತಿದೇವಿಯ ಶಾಪವಿದೆ. ಆದ್ದರಿಂದ ಜೋತಿಷ್ಕರು ಹೇಳಿದುದೆಲ್ಲಾ ನಡೆಯುಲು ಸಾಧ್ಯವಿಲ್ಲ. ಅದರಲ್ಲೂ ಸ್ವಂತವಿಷಯದಲ್ಲಿ ಇಲ್ಲ. ಅದಿರಲಿ. ಆದರೆ ನನ್ನ ಆಯುಷ್ಯದ ವಿಷಯದಲ್ಲಿ ಮಾತ್ರ ಒಂದು ವಿಚಿತ್ರವಾದ ರಹಸ್ಯವಿದೆ. ಈ ರಹಸ್ಯವನ್ನು ನಾನು ನನ್ನ ಪತ್ನಿಗೂ ಹೇಳಿರಲಿಲ್ಲ. ಆದರೆ ಆಳುವ ಮಹಾಸ್ವಾಮಿಯವರು ನನ್ನ ಕ್ಷೇಮವನ್ನು ಚಿಂತಿಸಿ ಕೋರುವಾಗ ಮರೆಮಾಚುವುದು ಸರಿಯೆನ್ನಿಸುವುದಿಲ್ಲ. ಅದೇನೆಂದರೆ ನಾನು ಸತ್ತ ಹತ್ತು ಗಂಟೆಗಳಲ್ಲಿ ಪ್ರಭುಗಳಿಗೆ ಪ್ರಾಣಾಪಾಯ ಒದಗುವುದೆಂದು ನನ್ನ ಜಾತಕದಲ್ಲಿ ಬರೆದಿದೆ. ಆದ್ದರಿಂದಲೇ ಎಷ್ಟೋ ಜನ ಇತರರಾಜರು ತಮ್ಮ ಆಸ್ಥಾನಕ್ಕೆ ಬರುವಂತೆ ಕೂಗಿದರೂ ಸಹ ತಮ್ಮನ್ನು ಬಿಟ್ಟು ಹೋಗಲು ಮನಸ್ಸಿಲ್ಲದೆ ನಿಂತು ಹೋಗಿದ್ದೇನೆ" ಎಂದ.

ಈ ಮಾತುಗಳನ್ನು ಕೇಳಿದಕೂಡಲೇ ರಣಾರ್ಣವನು ಏನೆಂದು ಭಾವಿಸಿದನೋ ಏನೋ, ತಳವಾರರನ್ನು ಹೋಗುವಂತೆ ಸಂಜ್ಞೆ ಮಾಡಿದ. ನಾಲ್ವರು ಭಟರನ್ನು ಜೊತೆ ಮಾಡಿ, ಸಮಯಜ್ಞನನ್ನು ಭದ್ರವಾಗಿ ಮನೆಗೆ ಕಳುಹಿಸಿಕೊಟ್ಟ. ಅಂದಿನಿಂದ ಸಮಯಜ್ಞನನ್ನು ಇರುವೆಯಾದರೂ ಕಚ್ಚದಂತೆ ಕಾಪಾಡುತ್ತಾ, ತನ್ನ ಪಂಚಪ್ರಾಣಗಳಲ್ಲಿ ಆತನನ್ನೂ ಒಂದು ಪ್ರಾಣದಂತೆ ನೋಡಿಕೊಳ್ಳುತ್ತಾ ಇದ್ದ ರಣಾರ್ಣವ.






ಬಹಳ ಕಾಲದ ಹಿಂದೆ ಉಜ್ಜಯಿನಿಯಲ್ಲಿ ಶೇಷಯ್ಯ ಶೆಟ್ಟಿ ಎಂಬ ಒಬ್ಬ ವರ್ತಕನಿದ್ದನು. ಆತನು ಹೊಗೆ ಸೊಪ್ಪಿನ ವ್ಯಾಪಾರ ಮಾಡಿ ಅಪಾರ ಹಣ ಗಳಿಸಿದ್ದನು. ಆದರೆ ಆತನಿಗೆ ಪರಊರಿಗೆ ಹೋಗುವ ಕೆಲಸವಿರಲಿಲ್ಲ.

ಒಂದು ದಿನ ಆತನ ಸ್ನೇಹಿತ ಚಂಗಲ ರೆಡ್ಡಿ ಬಂದು "ಏನು ಶೆಟ್ರೇ, ಈಗಾಗಲೇ ಇಪ್ಪತ್ತು ಮನೆಗಳನ್ನು ಕಟ್ಟಿಸಿರುವಿರಿ. ಮುವತ್ತು ಲಕ್ಷದ ಆಸ್ತಿ ಮಾಡಿರುವಿರಿ. ಹೊಲಗದ್ದೆ ಬೇಕಾದಷ್ಟಿದೆ. ಎಷ್ಟು ಸಂಪಾದಿಸಿದರೆ ನಿಮಗೆ ತೃಪ್ತಿಯಾಗುತ್ತೆ? ಆಶೆಗೆ ಕೊನೆಯಿದೆಯೋ? ಇನ್ನುಮೇಲೆ ಪುಣ್ಯ ಗಳಿಸಿ ಮುಂದಿನ ಗತಿ ನೋಡಿಕೊಳ್ಳಬೇಕೇ ಹೊರತು ಸದಾ ಈ ಐಹಿಕ ವಿಚಾರಗಳಲ್ಲೇ ಬಿದ್ದಿರುವುದೇ? ಏಳಿ. ಹೊರಡುವ. ಹಾಗೇ ದಕ್ಷಿಣದೇಶದ ಯಾತ್ರೆ ಮಾಡಿಕೊಂಡು ಬರೋಣ. ಪುಣ್ಯ, ಪುರುಷಾರ್ಥ ಎಲ್ಲಾ ಕೂಡಿಬರುತ್ತೆ" ಎಂದು ಹಿತವಚನ ನುಡಿದನು.

ಈ ಮಾತು ಶೆಟ್ಟಿಯ ಮನಸ್ಸಿಗೆ ಹಿಡಿಯಿತು. ರೆಡ್ಡಿ ಹೇಳಿದ ಮಾತನ್ನು ಕೂಡಲೇ ಅಂಗೀಕರಿಸಿದನು. ಆಗಿನ ಕಾಲದಲ್ಲಿ ಯಾತ್ರೆ ಹೋಗಿ ಬರಬೇಕಾದರೆ ಬಹಳ ಕಾಲ ಹಿಡಿಯುತ್ತಿತ್ತು. ಆದುದರಿಂದ ತನ್ನ ಆಸ್ತಿ ಪಾಸ್ತಿ, ಹೊಗೆಸೊಪ್ಪಿನ ವ್ಯಾಪಾರಗಳನ್ನೆಲ್ಲಾ ಕುಟುಂಬಕ್ಕೆ ಒಪ್ಪಿಸಿ "ಮಕ್ಕಳೇ, ಕೈಯಲ್ಲಾದಷ್ಟು ಗಳಿಸಿಟ್ಟಿದ್ದೇನೆ. ಇನ್ನು ತೀರ್ಥಯಾತ್ರೆ ಮಾಡಿಕೊಂಡು ಪುಣ್ಯ ಸಂಪಾದಿಸಿಕೊಳ್ಳಬೇಕು. ಆದ್ದರಿಂದ ಇನ್ನು ಮುಂದೆ ಸಂಸಾರ, ವ್ಯಾಪಾರ ಎಲ್ಲಾ ನೀವೇ ನೋಡಿಕೊಳ್ಳಿ" ಎಂದು ಹೇಳಿ ವ್ಯಾಪಾರದಲ್ಲಿ ಕೆಲ ಸೂಕ್ಷ್ಮವಾದ ಮರ್ಮಗಳನ್ನು ಅವರಿಗೆ ತಿಳಿಸಿದನು.

ಏರ್ಪಾಟಿನಂತೆ ಚೆಂಗಲ ರೆಡ್ಡಿ ಶೇಷಯ್ಯ ಶೆಟ್ಟಿ ಕಲೆತು ಯಾತ್ರೆಗೆ ಹೊರಟು, ಮೊದಲು ಮಧುರಾಪಟ್ಟಣದ ಪಕ್ಕದಲ್ಲಿದ್ದ ಚಿಕ್ಕ ಕ್ಷೇತ್ರಕ್ಕೆ ಹೋಗಿ ಅಲ್ಲಿರುವ ಅಳಗಿರಿದೇವರಿಗೆ ಪೂಜೆ ಪುನಸ್ಕಾರಗಳನ್ನು ನಡೆಸಿದರು. ಪೂಜೆ ಮುಗಿದ ತರುವಾಯ ಶೆಟ್ಟಿ ದೇವರ ವಿಗ್ರಹ ನೋಡಿ "ರೆಡ್ಡಿ, ಈ ದೇವರೇಕೆ ಒಂದು ಕೈ ಮೇಲೆ, ಒಂದು ಕೈ ಕೆಳಗೆ ತೋರಿಸುತ್ತಾ ಇದ್ದಾರೆ?" ಎಂದು ಕೇಳಿದನು.

ಎಸ್. ಬಿ. ಭರತಸಿಂಗ್, ಮುಂಬಯಿ.





ಈ ಪ್ರಶ್ನೆಗೆ ಉತ್ತರವೇನು ಹೇಳಬೇಕೋ ರೆಡ್ಡಿಗೆ ತಿಳಿಯದಾಯಿತು. ಆದರೆ 'ನನಗೆ ಗೊತ್ತಿಲ್ಲ' ಎಂದು ಹೇಳಿ ತನ್ನ ಅಜ್ಞಾನ ತೋರಿಸಿಕೊಳ್ಳುವುದು ರೆಡ್ಡಿಗೆ ಇಷ್ಟವಿಲ್ಲ. ಆದುದರಿಂದ ಉಪಾಯವಾಗಿ "ಶೆಟ್ಟಿ, ನಾವು ಭಕ್ತಿಯಿಂದ ದೇವರನ್ನು ಸೇವಿಸುವುದೆಷ್ಟೋ ಅಷ್ಟೇ ಹೊರತು, ನಡು ನಡುವೆ ಈ ರೀತಿ ಶಂಕೆ ಇಟ್ಟುಕೊಳ್ಳಕೂಡದು. ನಿನ್ನ ಸಂಶಯವನ್ನು ತರುವಾಯ ಪರಿಹರಿಸುವೆನು" ಎಂದು ಹೇಳಿ ಆಗ ತಪ್ಪಿಸಿಕೊಂಡ ರೆಡ್ಡಿ.

ಆನಂತರ ಅವರು ಕಂಚಿಗೆ ಹೋಗಿ ಅಲ್ಲಿ ವರದರಾಜಸ್ವಾಮಿಯನ್ನು ಸೇವಿಸಿಕೊಂಡರು. ಇಲ್ಲಿ ಮತ್ತೆ ಶೆಟ್ಟಿಗೆ ಒಂದು ಸಂಶಯ ಜನಿಸಿತು. "ಅಯ್ಯಾ ಗೆಳೆಯಾ, ಅಳಗಿರಿಸಾಮಿ ಒಂದು ಕೈ ಮೇಲೆ ಒಂದು ಕೈ ಕೆಳಗೆ ಇಟ್ಟುಕೊಂಡಿದ್ದರೆ ಈ ವರದರಾಜಸ್ವಾಮಿ ಎರಡು ಕೈಗಳನ್ನು ಬೊಗಸೆಯಂತೆ ಇಟ್ಟುಕೊಂಡಿದ್ದಾನಲ್ಲಾ, ಏನು ವಿಷಯ?" ಎಂದು ಪ್ರಶ್ನೆ ಮಾಡಿದನು.

ಈ ಪ್ರಶ್ನೆಗೆ ಉತ್ತರ ತಿಳಿಯಲಿಲ್ಲ ರೆಡ್ಡಿಗೆ. ಹೇಗೋ ಒಂದು ವಿಧವಾಗಿ ತಪ್ಪಿಸಿಕೊಳ್ಳಬೇಕೆಂದು "ಅಪ್ಪಾ, ನಾನು ಆಗಲೇ ಹೇಳಿದೆನಲ್ಲಾ, ಯಾತ್ರೆ ಮಾಡುವ ಸಮಯದಲ್ಲಿ ನಾವು ಯಾವುದೇ ವಿಧವಾದ ಸಂಶಯವನ್ನು ಇಟ್ಟುಕೊಳ್ಳಕೂಡದು ಅಂತ. ಹಾಗೆ ಮಾಡಿದ್ದೇ ಆದರೆ ಯಾತ್ರೆ ಮಾಡಿದ ಫಲ

ದಕ್ಕುವುದಿಲ್ಲ. ಆದರೂ ಇದರ ವಿಷಯವೆಲ್ಲಾ ಆಮೇಲೆ ಹೇಳುತ್ತೇನೇ ಎಂದು ನಾನು ಹೇಳ ಲಿಲ್ಲವೇ? ಇಷ್ಟರಲ್ಲೇ ನಿನಗೆ ಅವಸರವೇನು?" ಎಂದು ರೆಡ್ಡಿ ಹೇಳಿ ತಂಟೆ ತಪ್ಪಿಸಿಕೊಂಡನು.

ರೆಡ್ಡಿ ಈ ರೀತಿ ಮೂದಲಿಸಲು, ಮತ್ತೆ ಕೆಲವು ಕ್ಷೇತ್ರಗಳನ್ನು ದರ್ಶನ ಮಾಡುವ ವರೆವಿಗೂ ಶೇಷಯ್ಯ ಶೆಟ್ಟಿ ರೆಡ್ಡಿಯನ್ನು ಯಾವ ಪ್ರಶ್ನೆಯನ್ನೂ ಕೇಳಲಿಲ್ಲ.

ಆದರೆ ಅವರು ಸುತ್ತಿ ಸುತ್ತಿ ಭದ್ರಾಚಲ ಕ್ಷೇತ್ರವನ್ನು ಸೇರುವವೇಳೆಗೆ ಶೆಟ್ಟಿಯ ಮನಸ್ಸಿನಲ್ಲಿ ಮತ್ತೆ ಸಂಶಯ ಜನಿಸಿತು. ಅಲ್ಲಿ ಮುಕುಲಿತ ಹಸ್ತನಾಗಿದ್ದ ಆಂಜನೇಯ ದೇವರ ವಿಗ್ರಹವನ್ನು ಕಂಡು, ಶೆಟ್ಟಿ 'ಅಯ್ಯಾ, ರೆಡ್ಡಿ, ಇದರ ವಿಷಯವಾಗಿಯಾದರೂ ಹೇಳು. ಈ ಹನುಮಂತ ಹೀಗೆ ಎರಡು ಕೈಗಳನ್ನೂ ಜೋಡಿಸಿ ನಿಂತುಕೊಂಡಿರಲು ಕಾರಣ ವೇನು?" ಎಂದು ಮತ್ತೆ ಕೇಳಿಯೇಬಿಟ್ಟನು.

ರೆಡ್ಡಿ ಕೋಪವನ್ನು ನಟಿಸುತ್ತಾ "ಎಲೈ ಶೆಟ್ಟಿ, ಯಾವಾಗಲೂ ವಿಗ್ರಹಗಳ ಕೈಗಳನ್ನೂ, ಮುಖಗಳನ್ನೂ ನೋಡುವುದೇ ಹೊರತು, ನೀನು ಆ ದೇವರುಗಳನ್ನು ಮನಸಾರೆ ಧ್ಯಾನ ಮಾಡಿದಂತೆ ತೋರುವುದಿಲ್ಲ. ಮನೆಬಿಟ್ಟು ಇಷ್ಟು ದೂರ ಬಂದಿದ್ದು ಇದಕ್ಕೇಯೇ?" ಎಂದು ಮೂದಲಿಸಲು ಶೆಟ್ಟಿ ಬದಲು ಹೇಳ ಲಾರದೆ ಆಗ ಸುಮ್ಮನಿದ್ದುಬಿಟ್ಟನು.

ಕೊನೆಗೆ ಅವರಿಬ್ಬರೂ ಶ್ರೀ ರಾಮಚಂದ್ರ ಮೂರ್ತಿಯನ್ನು ದರ್ಶನ ಮಾಡಿ, ಆ ದೇವ







ದೇವನನ್ನು ಭಕ್ತಿಯಿಂದ ಸೇವಿಸಿ ಮುಕ್ತಿ ಪಡೆಯುವ ಸಂಕಲ್ಪಹೊಂದಿ ಗುಡಿಯೊಳಕ್ಕೆ ಪ್ರವೇಶಿಸಿದರು. ರೆಡ್ಡಿ ಕಣ್ಣು ಮುಚ್ಚಿಕೊಂಡು ಧ್ಯಾನದಿಂದ ಯಾವುದೋ ಶ್ಲೋಕಗಳನ್ನೂ ಸ್ತೋತ್ರಗಳನ್ನೂ ಹೇಳುತ್ತಿದ್ದನು. ಆದರೆ ಶೆಟ್ಟಿ ಮಾತ್ರ ರಾಮ ದೇವರ ಕೈಗಳಕಡೆಯೇ ವಿಸ್ಮಯದಿಂದ ನೋಡುತ್ತಾ ನಿಂತುಬಿಟ್ಟನು.

ರೆಡ್ಡಿ ಧ್ಯಾನ ಪೂರ್ತಿ ಮಾಡಿಕೊಂಡು ಕಣ್ಣು ತೆರೆದಕೂಲೇ ಶೆಟ್ಟಿ ಲಗು ಬಗನೆ ಆತನ ಹತ್ತಿರ ಹೋಗಿ " ಎಲೈ ಸ್ನೇಹಿತನೇ, ನೀನು ಈ ರಾಮ ದೇವರು ಕೈ ಬೆರಳುಗಳಿಂದ ಚಿಟಕಿ ಹಿಡಿದು ನಿಂತಿದ್ದಾರಲ್ಲಾ ಯಾಕೆ ಹೇಳು ವಿಯೋ ಇಲ್ಲವೋ, ಇಲ್ಲದಿದ್ದರೆ ಈ ಸಲ, ಬಿಡುವುದಿಲ್ಲ. ಏನಾದರಾಗಲೀ" ಎಂದು ಹಟ ಹಿಡಿದನು. ರೆಡ್ಡಿ ಏನೂ ಹೇಳಲಾರದೆ ಸಪ್ಪೆ ಮುಖ ಹಾಕಲು, ಶೆಟ್ಟಿ ಉದ್ರೇಕ ಗೊಂಡು " ವಾರೆವಾ, ರೆಡ್ಡಿ, ಈ ಯಾತ್ರೆಗಳಿ ಗೆಂದು ನನ್ನ ಕೈಯಿಂದ ಹಣವೆಲ್ಲಾ ಹಾಳು ಮಾಡಿಸಿದೆ. ಯಾತ್ರೆ ಮಾಡಿದರೆ ಪ್ರಪಂಚ ಜ್ಞಾನ ಹೆಚ್ಚುವುದೆಂದು ಹೇಳಿದೆ. ಸಂಶಯ ಗಳು ಪರಿಹಾರವಾಗುವುದೆಂದು ಹೇಳಿದೆ. ಕೊನೆಗೆ ಈ ಊರುಗಳನ್ನೆಲಾ ಸುತ್ತಿಸಿ, ನನ್ನ ಪ್ರಶ್ನೆಗಳೊಂದಕ್ಕೂ ಸಮಾಧಾನ ಹೇಳದೆ ಮೋಸ ಮಾಡುವೆಯಾ? ಸರಿ ಬಿಡು. ನಿನ್ನ ಪುಣ್ಯವೂ ನನಗೆ ಬೇಡ, ನಿನ್ನ ಸ್ನೇಹವೂ ನನಗೆ ಬೇಡ. ನಿನ್ನ ದಾರಿ ನೀನು ಹಿಡಿ" ಎಂದು ಖಡಾ ಖಂಡಿತವಾಗಿ ಹೇಳಿಬಿಟ್ಟು, ಆತನ ಸಂಗ ತ್ಯಜಿಸಿ ತಾನೊಬ್ಬನೇ ಹಿಂತಿರುಗಿ ಮನೆಗೆ ಬಂದು ಸೇರಿದನು.

ಶೇಷಯ್ಯನೇನೋ ಮನೆ ಸೇರಿದ. ಆದರೆ ಆತನ ಮನಸ್ಸೆಲ್ಲಾ ತಾನು ನೋಡಿಕೊಂಡು ಬಂದ ದೇವರುಗಳು ಯಾವಯಾವ ರೀತಿ ಕೈ ಹಿಡಿದುಕೊಂಡಿದ್ದರೋ ಅದರ ಕಡೆಗೇ ಹರಿಯುತಿತ್ತು. ಎಷ್ಟು ದಿನ ಆಲೋಚಿಸಿದರೂ ಆತನ ಸಂಶಯ ನಿವಾರಣೆಯಾಗಲಿಲ್ಲ, 'ಸರಿ, ಎಷ್ಟು ಹಣ ಖರ್ಚಾದರೂ ಸರಿ. ಅದನ್ನು ತಿಳಿಯಲೇ ಬೇಕು. ಇಲ್ಲದಿದ್ದರೆ ಈ ಜನ್ಮ ಸಾರ್ಥಕವಾಗುವುದಿಲ್ಲ' ಎಂದುಕೊಂಡು, ತನ್ನ ಸಮಸ್ಯೆಗಳಿಗೆ ಸರಿಯಾದ ಸಮಾಧಾನ ಹೇಳುವವರಿಗೆ ಬೇಡಿದ ಬಹುಮಾನ ಕೊಡುವೆನೆಂದು ಊರಲ್ಲಿ ಸುದ್ದಿ ಹರಡಿದನು.

ಶೆಟ್ಟಿಯ ಪ್ರಕಟನೆ ಕೇಳಿ ದೇಶ ದೇಶಗಳಿಂದ ಭೂಪರ್ಯಟನೆ ಮಾಡಿದವರು, ವೇದ ವಿದ್ಯಾಪಾರಂಗತರು, ಸಕಲ ಶಾಸ್ತ್ರ ಪ್ರವೀಣರು ಉಜ್ಜಯಿನಿ ನಗರಕ್ಕೆ ಬಂದು ಇಳಿದರು. ಶೆಟ್ಟಿಯ ಮನೆ ಅಂಗಳದಲ್ಲಿ ಒಂದು ಪಂಡಿತರ ಪ್ರಚಂಡ ಸಭೆ ಏರ್ಪಾಡಾಯಿತು. ಶಾಸ್ತ್ರ ಪಾರಂಗತರೆಲ್ಲರೂ ಆ ವಿಗ್ರಹಗಳ ಮುದ್ರೆಗೆ ಅನೇಕ ಅರ್ಥಗಳನ್ನೂ, ಅಂತರಾರ್ಥಗಳನ್ನೂ, ವಿಶೇಷಾರ್ಥಗಳನ್ನೂ ಹೇಳಿದರೂ ಶೆಟ್ಟಿ ಮನಸ್ಸಿಗೆ ಹಿಡಿಸಲಿಲ್ಲ. ಶೆಟ್ಟಿ ಯೋಚಿಸುತ್ತಾ ಸುಮ್ಮನೆ ಕುಳಿತಿರುವಲ್ಲಿ ಸಭೆಯಲ್ಲಿದ್ದ ರಂಗಣ್ಣ ಎಂಬ ರೈತನೆದ್ದು "ಇಷ್ಟು ಮಾತ್ರಕ್ಕೆ ಈ ಪಂಡಿತರೆಲ್ಲಾ ಏಕೆ? ಈ ಗೊಂದಲ ಏಕೆ? ನಮ್ಮ ಶೇಷಯ್ಯನಿಗೆ ನಾನು ಸಮಾಧಾನ ಕೊಡುತ್ತೇನೆ" ಎಂದು ಮುಂದೆ ಬಂದನು. ಪಂಡಿತರೆಲ್ಲ ಮಿಕಿ ಮಿಕಿ ನೋಡುತ್ತಾ ಕುಳಿತುಕೊಂಡರು. ರಂಗಣ್ಣ ಅದೇ ಊರಿನವ. ಶೆಟ್ಟಿಯ ಮನಸ್ಸು ಚೆನ್ನಾಗಿ ಅರಿತವ.

ಆಗ ರಂಗಣ್ಣ ಹೀಗೆ ಹೇಳಲು ಪ್ರಾರಂಭಿಸಿದ. "ಶೇಷಯ್ಯ, ಇಷ್ಟೊಂದು ಅನುಭವವಿದ್ದೂ ಸಹ, ಇಷ್ಟು ಮಾತ್ರ ತಿಳಿಯಲಾರದೆ ಹೋದೆಯಾ? ಆ ಅಳಗಿರಿಸ್ವಾಮಿ 'ನಮ್ಮ ಕ್ಷೇತ್ರದಲ್ಲಿರುವ ಭೂಮಿ ಎಷ್ಟು ಫಲವತ್ತಾದುದೋ ನಿನಗೆ ತಿಳಿದಿದೆಯೇ? ಇಲ್ಲಿ ಹೊಗೆಸೊಪ್ಪು ಸೊಗಸಾಗಿ ಒಂದು ಗಜದಷ್ಟು ಎತ್ತರ ಬೆಳೆಯುತ್ತದೆ' ಎಂದು ಹೇಳಲು ತನ್ನ




ಕೈಗಳಲ್ಲಿ ಒಂದನ್ನು ಮೇಲೂ, ಒಂದನ್ನು ಕೆಳಗೂ ಒಂದು ಗಜ ಅಂತರದಲ್ಲಿ ಹಿಡಿದು ಪ್ರತಿಯೊಬ್ಬರಿಗೂ ತಿಳಿಯುವಂತೆ ಪ್ರತ್ಯಕ್ಷವಾಗಿ ತೋರಿಸುತ್ತಾ ನಿಂತಿದ್ದಾನೆ" ಎಂದು ಹೇಳಲು, ಶೇಷಯ್ಯನ ಮುಖದಲ್ಲಿ ಮುಗುಳು ನಗೆ ಮಿಂಚಿತು.

ತರುವಾಯ ರಂಗಣ್ಣ ಮುಂದುವರಿಸಿದ. "ಅಣ್ಣಾ, ಈ ವಿಧವಾಗಿ ಬೆಳೆದಂತಹ ಹೊಗೆಸೊಪ್ಪು, ಇಷ್ಟು ಅಗಲವಾಗಿರುತ್ತದೆ' ಎಂದು ಹೇಳಲು ಕಂಚಿ ವರದರಾಜಸ್ವಾಮಿ ತನ್ನ ಎರಡು ಕೈಗಳನ್ನು ಚಾಚಿ ನಮಗೆ ತೋರಿಸುತ್ತಿರುವನು" ಎಂದ. ಈ ಮಾತು ಕೇಳಿ ದೇವರು ತನ್ನ ವ್ಯಾಪಾರಕ್ಕೆ ಸಂಬಂಧಿಸಿದ ವಿಷಯವನ್ನೇ ಬೋಧಿಸುತ್ತಿರುವನೆಂದು ಶೆಟ್ಟಿಯ ಆನಂದಕ್ಕೆ ಪಾರವೇ ಇಲ್ಲ.

"ಮತ್ತೆ ಹಾಗಾದರೆ ಭದ್ರಾಚಲದಲ್ಲಿ ಹನುಮಂತ ಏಕೆ ಕೈ ಜೋಡಿಸಿಕೊಂಡು ನಿಂತಿದ್ದಾನೆ?" ಎಂದು ಆತುರದಿಂದ ಕೇಳಿದ ಶೆಟ್ಟಿ.

ಅದಕ್ಕೆ ರಂಗಣ್ಣ "ಶೆಟ್ಟಿ, 'ಅಷ್ಟು ಎತ್ತರವಾಗಿಯೂ, ಅಷ್ಟೊಂದು ಅಗಲವಾಗಿಯೂ ಬೆಳೆದಂತಹ ಹೊಗೆಸೊಪ್ಪಿನ ಗಾತ್ರ ಇಷ್ಟುದಪ್ಪಕ್ಕೆ ಇರುತ್ತದೆ' ಎಂದು ತೋರಿಸುವುದು ಆಂಜನೇಯ ದೇವರ ಉದ್ದೇಶ" ಎಂದು ಶೆಟ್ಟಿ ಹಾಕಿದ ಮೂರನೇ ಪ್ರಶ್ನೆಗೆ ಸಮಾಧಾನ ಹೇಳಿದ. ರಂಗಣ್ಣನ ತಿಳುವಳಿಕೆಗೆ ಸಂತೋಷಪಟ್ಟು ಶೆಟ್ಟಿ ಆಶ್ಚರ್ಯದಲ್ಲಿ ಮುಳುಗಿದ.

"ರಂಗಣ್ಣಾ, ನೀನು ಹೇಳಿದುದೆಲ್ಲಾ ಸರಿ. ಆದರೆ ಶ್ರೀ ರಾಮದೇವರ ವಿಷಯವೇನು?" ಎಂದು ಕಾತುರದಿಂದ ಪ್ರಶ್ನೆ ಮಾಡಿದ ಶೆಟ್ಟಿ.

"ಅಣ್ಣಾ, ಇಷ್ಟು ದೇಶಗಳನ್ನು ಸುತ್ತಿಕೊಂಡು ಬಂದೆಯಲ್ಲಾ, ಈ ಸಾಧಾರಣ ವಿಷಯ ಅರಿಯಲಾರದೆ ಹೋದರೆ ನಿನ್ನ ಪ್ರಪಂಚ ಜ್ಞಾನಕ್ಕೆ ಏನೆಂದು ಹೇಳಬೇಕು? ಸರಿ, ರಾಮದೇವರ ಉದ್ದೇಶ ಹೇಳುವೆನು ಕೇಳು—ಇಂತಹ ಪ್ರಶಸ್ತವಾದ ಹೊಗೆಸೊಪ್ಪಿನಿಂದ ತಯಾರಿಸಿದ ನಸ್ಯ ಒಂದು ಚಿಟಿಕೆ ಮೂಗಿಗೇರಿಸಿದರೆ ಸಾಲದೆ, ಕೈಲಾಸ ಕಾಣಿಸಲು?" ಎಂಬ ಭಾವವನ್ನು ನಮಗೆ ತಿಳಿಯಪಡಿಸಲೇ ಅವತಾರ ಮೂರ್ತಿಯಾದ ಆ ಮಹಾನುಭಾವ ಆ ರೀತಿ ಚಿಟಿಕೆ ಹಿಡಿದುಕೊಂಡಿದ್ದಾನೆ" ಎಂದು ವಿಶದೀಕರಿಸಿದ ಕೂಡಲೇ ಶೆಟ್ಟಿ ಸಂತೋಷದಿಂದ ಉಬ್ಬಿಹೋಗಿ ರಂಗಣ್ಣನನ್ನು ಅಪ್ಪಿ "ಎಲೈ ರಂಗಣ್ಣಾ, ನೀನು ಇಂತಹ ಮೇಧಾವಿ ಎಂದು ಅರಿಯದೆ ಈ ಪಂಡಿತರನ್ನೆಲ್ಲಾ ಕರೆಸಿದೆ. ಇದೇ ನನಗೆ ಸುದಿನ. ನಾನು ಮಾಡಿದ ಯಾತ್ರೆ ಸಾರ್ಥಕವಾಯಿತು." ಎಂದು ಪರಿ ಪರಿ ವಿಧದಲ್ಲಿ ಮೆಚ್ಚಿಕೊಂಡು ರಂಗಣ್ಣ ಬೇಡಿದ ಬಹುಮಾನಗಳನ್ನು ಕೊಟ್ಟು ಸನ್ಮಾನಿಸಿ ಕಳುಹಿಸಿದ.

"ಶೆಟ್ಟಿಯ ಮನಸ್ಸಿಗೆ ಹಿಡಿಸುವಂತಹ ಮಾತಿನಲ್ಲಿ ನಾವು ಯಾರೂ ಭಾವಾರ್ಥ ಹೇಳಲಾರದೆ ಹೋದೆವು. ಕೆಲಸಕ್ಕೆ ಬಾರದ ಪಾಂಡಿತ್ಯ ನಮ್ಮದು" ಎಂದು ತಮ್ಮನ್ನು ತಾವೇ ಹಳಿದುಕೊಂಡು, ಪೆಚ್ಚುಮುಖದಿಂದ ಪಂಡಿತರೆಲ್ಲರೂ ಮೆಲ್ಲನೆ ಜಾರಿಕೊಂಡರು.





# ಕೀರ್ತಿಕಾಂತೆ

**ಪೂ**ರ್ವಕಾಲದಲ್ಲಿ ಕೊಂಡವೀಡು ಎಂಬ ಗ್ರಾಮದಲ್ಲಿ ರಾಯಣ್ಣ ಅಂತ ಒಬ್ಬಾತನಿದ್ದ. ಆತನಿಗೆ ಭಾಸ್ಕರ ಅಂತ ಒಬ್ಬ ಮಗ. ರಾಯಣ್ಣನ ಮಗನಾದುದರಿಂದ ಆತನನ್ನು ರಾಯನ ಭಾಸ್ಕರ ಎಂದು ಕರೆಯುತ್ತಿದ್ದರು. ಆ ರಾಯನಭಾಸ್ಕರನಿಗೆ ಹುಟ್ಟಿದಾಗಲಿಂದಲೂ ದಾನ ಮಾಡುವುದೆಂದರೆ ತುಂಬಾ ಇಷ್ಟ. 'ಇಲ್ಲ' ಎಂಬ ಮಾತು ಆತನ ಬಾಯಿಯಿಂದ ಎಂದೂ ಬರಲಿಲ್ಲವಂತೆ. ಹೆಚ್ಚು ಹೇಳಬೇಕೆಂದರೆ, ಸಣ್ಣ ವಯಸ್ಸಿನಲ್ಲಿ ಕಾಗುಣಿತ ಕಲಿಯುವಾಗಲೂ ಸಹ ಈ ಎರಡು ಅಕ್ಷರಗಳನ್ನು ಆತನು ಕೈಯಿಂದ ಬರೆಯಲಿಲ್ಲ ಎಂದು ಜನರಲ್ಲಿ ಪ್ರತೀತಿಯಿತ್ತು.

ಚಿಕ್ಕಂದಿನಲ್ಲೇ ಇಷ್ಟು ಉದಾರನಾಗಿದ್ದ ಭಾಸ್ಕರ, ಬೆಳೆದು ದೊಡ್ಡವನಾದಂತೆ ಎಷ್ಟೋ ದಾನ ಧರ್ಮಗಳನ್ನು ಮಾಡುತ್ತಾ ಬಂದ. ಕ್ರಮೇಣ ಕೊಂಡವೀಡಿಗೆ ಅಧಿಪತಿ ಆಗುವ ವೇಳೆಗೆ ಆತ ಮಾಡಿದ ದಾನ ಧರ್ಮಗಳಿಗೆ ಲೆಕ್ಕವೇ ಇಲ್ಲದಾಯಿತು. ಪುರಾಣ ಕಾಲದಲ್ಲಿ ಬಲಿಚಕ್ರವರ್ತಿ, ಕರ್ಣ ಎಷ್ಟು ಹೆಸರು ಪಡೆದರೋ ಈ ಕಲಿಯುಗದಲ್ಲಿ ರಾಯನ ಭಾಸ್ಕರನನ್ನು ಮೀರಿಸಿದ ಮಹಾದಾತ ಈ ಭೂಲೋಕದಲ್ಲೇ ಇಲ್ಲ ಎಂಬ ಕೀರ್ತಿ ದೇಶದೇಶಗಳಲ್ಲಿ ಹರಡಿತು. ಇಂತಹ ರಾಯನ ಭಾಸ್ಕರ ಬಹಳ ಕೀರ್ತಿ ಸಂಪಾದಿಸಿದ ನಂತರ ಕೊಂಚ ಕಾಲಕ್ಕೆ ಸ್ವರ್ಗಸ್ಥನಾದ. ಮಿತಿಯಿಲ್ಲದೆ ಆತನು ಮಾಡಿದ ಮಹಾ ದಾನಗಳಿಂದ ಕೀರ್ತಿಯೇನೋ ಲಭಿಸಿತು, ಆದರೆ ಖಜಾನೆ ಖಾಲಿ ಆಯಿತು. ಅದರಿಂದಾಗಿ ಕ್ರಮೇಣ ಅವರ ಕುಟುಂಬ ಬಡತನದಿಂದ ಬಳಲಿ ಪಾಡು ಪಡಬೇಕಾಯಿತು.

ಈ ರಾಯನಭಾಸ್ಕರನಿಗೆ ಕೊಂಡಯ್ಯ ಅಂತ ಒಬ್ಬ ಮಗನಿದ್ದ. ಕೊಂಡಯ್ಯ ಸೇನಾಧಿಪತಿಯಾಗಿದ್ದು ಎಷ್ಟೇ ಬಡತನವಿದ್ದಾಗ್ಯೂ, ಗೌರವವಾಗಿಯೇ ಜೀವಿಸುತ್ತಿದ್ದ. ಕೆಲ ದಿನಗಳಾದ ಮೇಲೆ ಕೊಂಡಯ್ಯ ಸಹ ಮರಣ ಹೊಂದಿದ. ಕೊಂಡಯ್ಯನಿಗೆ ಒಬ್ಬನೇ ಮಗ.

ತೆಲಗು ಕಥೆಯಿಂದ.



ಅವನಿಗೆ ಅಜ್ಜನ ಹೆಸರಿಟ್ಟು, ಚಿಕ್ಕ ಭಾಸ್ಕರ ಅಂತ ಕೂಗುತ್ತಿದ್ದರು.

ಬಡ ಕುಟುಂಬವಾದುದರಿಂದ ಚಿಕ್ಕ ಭಾಸ್ಕರನೂ ಆತನ ತಾಯಿಯೂ ಒಂದು ಸಣ್ಣ ಮನೆಯಲ್ಲಿ ಅಜ್ಞಾತವಾಸ ಮಾಡಿಕೊಂಡು ಸ್ವಲ್ಪದರಲ್ಲೇ ಕುಟುಂಬ ಪೋಷಣೆ ಸಾಗಿಸುತ್ತಿದ್ದರು. ಹಣಕ್ಕೆ ಎಷ್ಟೇ ಅಡಚಣೆಯಾಗಿದ್ದರೂ ಸಹ, ಚಿಕ್ಕ ಭಾಸ್ಕರನು ಶಾಲೆಯಲ್ಲಿ ವಿದ್ಯೆ ಕಲಿಯಲು ಯಾವೊಂದು ಅಡ್ಡಿ ಆತಂಕವೂ ಬರದಿರಲು ತಾಯಿ ತಕ್ಕ ವ್ಯವಸ್ಥೆ ಮಾಡಿದ್ದಳು.

ಒಂದು ದಿನ ಚಿಕ್ಕ ಭಾಸ್ಕರನು ಶಾಲೆಯಲ್ಲಿರುವಾಗ ಭಟ್ಟಂಗಿ ಒಬ್ಬಾತನು ಅಲ್ಲಿಗೆ ಬಂದು, ಮೇಷ್ಟರರೊಂದಿಗೆ ಹರಟೆ ಹೊಡೆಯುತ್ತಾ ಅದೂ ಇದೂ ಮಾತಾಡುತ್ತಾ 'ಮೇಷ್ಟರೇ, ಕೀರ್ತಿಕಾಂತೆ ರಾಯನಭಾಸ್ಕರರೊಂದಿಗೇ ಹೊರಟು ಹೋದಳು" ಎಂದು ಅರ್ಥ ಬರುವ ಒಂದು ಪದ್ಯ ಹೇಳಿದ.

ತನ್ನ ತಾತನನ್ನು ಕುರಿತ ಈ ಮಾತು ಕಿವಿಗೆ ಬಿತ್ತೋ ಇಲ್ಲವೋ ಅಲ್ಲೇ ಇದ್ದ ಚಿಕ್ಕ ಭಾಸ್ಕರನಿಗೆ ಅಭಿಮಾನವು ಉಕ್ಕಿಬಂದು ಕೈಯಲ್ಲಿ ಹಾಕಿಕೊಂಡಿದ್ದ ಬಂಗಾರದ ಬಳೆಗಳಲ್ಲಿ ಒಂದನ್ನು ತೆಗೆದು ಭಟ್ಟಂಗಿಗೆ ಕೊಟ್ಟುಬಿಟ್ಟ.

ಇಷ್ಟು ಉದಾತ್ತನಾದ ಹುಡುಗ ಯಾರು ಎಂದು ಆಶ್ಚರ್ಯದಿಂದ ಮೇಸ್ಟರನ್ನು ಕೇಳಿದ ಆ ಭಟ್ಟಂಗಿ. ಆ ಹುಡುಗ ರಾಯನಭಾಸ್ಕರರ ಮೊಮ್ಮಗನೆಂದು ಹೇಳಿದಕೂಡಲೇ ಭಟ್ಟಂಗಿ ತನ್ನ ಧೋರಣೆ ಬದಲಾಯಿಸಿ "ಕೀರ್ತಿಕಾಂತೆ ಹೊರಟು ಹೋದಳೆಂದುಕೊಂಡಿದ್ದೆವು. ಆದರೆ ಹೋಗಿಲ್ಲ. ಆಕೆ ಇಲ್ಲಿಯೇ ಇದ್ದಾಳೆ" ಎಂಬ ಅರ್ಥ ಬರುವಂತೆ, ಚಿಕ್ಕಭಾಸ್ಕರನನ್ನು ಹೊಗಳುತ್ತಾ ಮತ್ತೊಂದು ಪದ್ಯ ಹೇಳಿ, ಆ ಬಳೆ ತೆಗೆದುಕೊಂಡು ಹೊರಟು ಹೋದ.

ಚಿಕ್ಕ ಭಾಸ್ಕರ ಪೌರುಷದಿಂದ ಆ ಬಳೆಯನ್ನೇನೋ, ಕೊಟ್ಟ, ಸರಿ. ಆದರೆ ಮನೆಗೆ ಹೋದರೆ ತನ್ನ ಬೋಳು ಕೈಗಳನ್ನು ನೋಡಿ ಎಲ್ಲಿ ತಾಯಿ ಕೋಪಗೊಳ್ಳುವಳೋ ಎಂದು ಮನದಲ್ಲಿ ಭಯಪಡುತ್ತಲೇ ಇದ್ದ. ಈ ಭಯದಿಂದ ಆ ಹುಡುಗ ತನ್ನ ಕೈಗೊಂದು ಬಟ್ಟೆ ಸುತ್ತಿಕೊಂಡು ಸಾಯಂಕಾಲವಾದ ಮೇಲೆ ಮನೆ ಸೇರಿದ. ತಾಯಿ ಎಷ್ಟು ಕರೆದರೂ ಊಟ ಮಾಡಲು ಹೋಗಲಿಲ್ಲ. ಕೈ ಹೊರಗೆ ತೆಗೆಯುತ್ತಲೇ ಇರಲಿಲ್ಲ. ಏನೂ ತೋರದೆ

ತಾಯಿಯ ಕಣ್ಣಿಗೆ ಬೀಳದಂತೆ ಅದರ ಹಿಂದೆ ಇದರ ಹಿಂದೆ ಓಡಾಡುತ್ತಿದ್ದ.

ಕೊನೆಗೆ ಆಕೆ ಮಗನ ಹತ್ತಿರಕ್ಕೆ ಹೋಗಿ ಕೈಹಿಡಿದು ನೋಡಲು ಬಳೆಯಿರಲಿಲ್ಲ. "ಏನಾಯಿತೋ ಮಗೂ?" ಎಂದು ಕೇಳಲು ಅಂಜುತ್ತಾ ಮೆಲ್ಲನೆ ನಡೆದ ವಿಷಯ ತಿಳಿಸಿದ. ಅದನ್ನೆಲ್ಲಾ ಕೇಳಿ ಆಕೆ ಕೋಪದಿಂದ "ಎಲೋ ಪೆದ್ದಾ, ಇದೇನೇ ನಿನ್ನ ಬುದ್ಧಿವಂತಿಕೆ?" ಎಂದು ಕಪಾಲಕ್ಕೆ ಒಂದೇಟು ಹಾಕಿದಳು. ಏಟು ತಿಂದ ಚಿಕ್ಕ ಭಾಸ್ಕರ "ಅಮ್ಮ, ಅಮ್ಮ, ಹೊಡೀಬೇಡಾಮ್ಮ. ಆ ಭಟ್ಟಂಗಿ ಎಲ್ಲಿದ್ದಾನೋ ಹುಡಿಕಿ ನನ್ನ ಬಳೆ ಮತ್ತೆ ತೆಗೆದುಕೊಂಡು ಬರುತ್ತೇನೆ" ಎಂದು ಅಳಲು ಪ್ರಾಂಭಿಸಿದ.

ಭಾಸ್ಕರನು ಈಪರಿ ಅಳುವುದನ್ನು ನೋಡಿ ಆ ತಾಯಿ ಮತ್ತಷ್ಟು ನೊಂದುಕೊಂಡಳು. "ಅದಲ್ಲೋ ಮೂರ್ಖ, ರಾಯಸಭಾಸ್ಕರರ ಮೊಮ್ಮಗನಾಗಿ ಒಂದು ಬಳೆ ಮಾತ್ರ ಕೊಟ್ಟು, ಇನ್ನೊಂದು ಬಳೆ ಬಚ್ಚಿಟ್ಟುಕೊಂಡೆಯಲ್ಲಾ, ಇದು ಪಿಸುನಾರಿತನವಲ್ಲವೇ? ನಿಮ್ಮ ತಾತನ ಕೀರ್ತಿಗೆ, ನಮ್ಮ ವಂಶಕ್ಕೆ ಅಪಕೀರ್ತಿ ತಂದೆಯಲ್ಲವೇ? ಎಂದು ಹೊಡೆದೆನೇ ಹೊರತು ನೀನು ಬಳೆ ಕೊಟ್ಟುದಕ್ಕೆ ಅಲ್ಲ. ಈಗ ಮಿಂಚಿ ಹೋದುದಾದರೂ ಏನು? ನಗರಕ್ಕೆ ಹೋಗಿ ಆ ಭಟ್ಟಂಗಿ ಎಲ್ಲಿದ್ದಾನೋ ಹುಡುಕಿ, ಈ ಬಳೆಯನ್ನೂ ಕೊಟ್ಟು ಬಾ. ಹೂಂ. ಹೋಗು,




ರಾಯಸಭಾಸ್ಕರರ ವಂಶದ ಹೆಸರು ಉಳಿಸಿಕೊ." ಎಂದು ಹೇಳಿದಳು.

ಕೂಡಲೇ ಚಿಕ್ಕ ಭಾಸ್ಕರ ಸಂತೋಷದಿಂದ ಹೊರಟು, ಆ ಹೊಗಳು ಭಟ್ಟನನ್ನು ಕಂಡು ಹಿಡಿದು ಆತನಿಗೆ ತನ್ನ ಎರಡನೇ ಬಳೆಯನ್ನೂ ಬಹುಮಾನವಾಗಿ ಕೊಟ್ಟ. ಇದನ್ನು ಕೇಳಿ ಆ ತಾತನ ಹೆಸರನ್ನು ಉಳಿಸಿದ ಚಿಕ್ಕ ಭಾಸ್ಕರನನ್ನೂ, ಚಿಕ್ಕ ಭಾಸ್ಕರನಂತಹ ಮಗನನ್ನು ಹೆತ್ತ ಆ ಮಾತೃದೇವಿಯನ್ನೂ ಜನ ಪರಿಪರಿಯಾಗಿ ಕೊಂಡಾಡಿದರು. ಭಾಸ್ಕರನ ಚರಿತ್ರೆ ಸೂರ್ಯನ ತೇಜಸ್ಸಿನಂತೆ ಪ್ರಕಾಶಿಸುತ್ತಾ ಇಂದಿಗೂ ಶಾಶ್ವತವಾಗಿರುವುದು. ಇಂತಹ ಮಹಾದಾತರು ಇದ್ದುದರಿಂದಲೇ ನಮ್ಮ ದೇಶ ಧರ್ಮಕ್ಕೂ, ತ್ಯಾಗಕ್ಕೂ ತೌರೂರಾಯಿತು.




ಒಂದಾನೊಂದು ಕಾಲದಲ್ಲಿ ಪಾಟಲೀಪುರವನ್ನು ಉತ್ತುಂಗಭುಜನೆಂಬ ರಾಜನು ಆಳುತ್ತಿದ್ದನು. ಆತನಿಗೆ ಇಬ್ಬರು ಹೆಂಡತಿಯರು. ಹಿರಿಯ ಹೆಂಡತಿಗೆ ನಂದನೆಂಬ ಒಬ್ಬ ಮಗನಿದ್ದನು. ಇಬ್ಬರು ಮಡದಿಯರೊಂದಿಗೆ ಸುಖವಾಗಿ ಕಾಲಕ್ಷೇಪ ಮಾಡುತ್ತಾ, ಉತ್ತುಂಗಭುಜನು ಸಕಲ ಸಂಪದಗಳೊಡನೆ ಓಲಾಡುತ್ತಿದ್ದನು.

ಹೀಗೇ ಇರುವಲ್ಲಿ ಕಾರಣಾಂತರದಿಂದ ರಾಜನಿಗೆ ಹಿರಿಯ ಹೆಂಡತಿಯ ಮೇಲೆ ಅಸಹ್ಯವೂ, ಕಿರಿಯ ಹೆಂಡತಿಯಮೇಲೆ ಅನುರಾಗವೂ ಉಂಟಾಯಿತು. ಇದರ ಕಾರಣ ಏನೆಂದರೆ-ಕಿರಿಯಾಕೆ ತುಂಬಾ ಅಂದಗಾತಿ. ಮಾತಿನಲ್ಲಿ ಮೋಹಗೊಳಿಸುವುದರಲ್ಲಿ ಗಟ್ಟಿಗಳು. ವಿಷಯ ಈ ರೀತಿಯಿರುವಲ್ಲಿ ರಾಜನು ಆಕೆಗೆ ಸಂಪೂರ್ಣ ಅಧೀನನಾಗುವುದರಲ್ಲಿ ಆಶ್ಚರ್ಯವಾದರೂ ಏನಿದೆ? ಎಷ್ಟರಮಟ್ಟಿಗೆ ದಾಸನಾಗಿದ್ದನೆಂದರೆ—ಕಿರಿಯ ಹೆಂಡತಿ ಹಾಕಿದ ಗೆರೆದಾಟುತ್ತಿರಲಿಲ್ಲ. ಅಷ್ಟೇ ಅಲ್ಲ. ಆಕೆ ಅನುಗ್ರಹಿಸಿದರೆ ಸಾಕು, ಅದೇ ತನಗೆ ಮೋಕ್ಷ. ಆಕೆಯನ್ನು ಮೆಚ್ಚಿಸುವುದೇ ತನ್ನ ಜೀವನದ ಗುರಿ, ಎಂದು ತಿಳಿದಿದ್ದ ಆತ. ಕಿರಿಯ ಹೆಂಡತಿಯನ್ನು ಮೆಚ್ಚಿಸುವುದೇನೋ ಸರಿ, ಯಾರೂ ಬೇಡ ಅಂತ ಹೇಳುವುದಿಲ್ಲ. ಆದರೆ ಪಟ್ಟದ ರಾಣಿ ಮತ್ತು ಆಕೆಯ ಕುವರ ಜೀವಿಸಿದ್ದಾರೆಯೇ ಇಲ್ಲವೇ ಎಂದು ಒಂದು ಸಾರಿಯಾದರೂ ತಿಳಿಯುವಗೋಜಿಗೆ ಹೋಗಲಿಲ್ಲ ಆ ರಾಜ. ಅವರ ತಿಂಡಿ ತೀರ್ಥ, ಬಟ್ಟೆಬರೆ ವಿಷಯವೇನು ಎಂಬ ಪ್ರಶ್ನೆ ಆತನೆಂದೂ ಆಲೋಚಿಸಿದ್ದೇ ಇಲ್ಲ. ಕೊನೆಗೆ ಪಟ್ಟದರಸಿಯ ಮಗು ನಂದನನ್ನು ಸಹ ಆದರದಿಂದ 'ಬಾರೋ ಮಗು' ಎಂದು ಕೂಗಲೂ ಪುಣ್ಯ ಪಡೆದುಕೊಂಡು ಬಂದಿರಲಿಲ್ಲವೆಂದಾಯಿತು. ಅಷ್ಟು ದೂರ ಹೋಗಿತ್ತು, ರಾಜನಿಗೆ ಪಟ್ಟದರಸಿಯ ಮೇಲಿನ ತಾತ್ಸಾರ. ತಂದೆ ತೋರಿಸುತ್ತಿದ್ದ ಪಕ್ಷಪಾತ, ಆತನ ಚರ್ಯ ನೋಡಿ, ಎಳೆಯ ನಂದನ ಮನಸ್ಸಿಗೆ ಅತೀವ ವ್ಯಥೆಯಾಯಿತು. ಆದರೇನು ತಾನೇ ಮಾಡಬಲ್ಲ?

ಬಿ. ಮಲ್ಲಿಕಾರ್ಜುನ, ಜಯಪುರ.

ಮುಖ ಚಿಕ್ಕದು ಮಾಡಿಕೊಂಡು ಹಾಗೇ ಕಾಲ ತಳ್ಳುತ್ತಿದ್ದ.

ಒಂದು ದಿನ ನಗರಕ್ಕೆ ಒಬ್ಬ ಭಾರಿ ಬಟ್ಟೆ ವ್ಯಾಪಾರಿ ಬಂದ. ಆತನು ರಾಜನ ದರ್ಬಾರಿಗೆ ತಕ್ಕಂತಹ ಬೆಲೆ ಬಾಳುವ ವಸ್ತ್ರಗಳನ್ನು ತೆಗೆದುಕೊಂಡು ಬಂದ. ಆ ವರ್ತಕ ಸೆಟ್ಟಿಗೆ ಅರಮನೆಗೆ ಹೋಗಿ ರಾಜನ ಸಂದರ್ಶನ ಮಾಡಿದ್ದೇ ತಡ ಆತನು ಸಾವಿರ ವರಹ ಬೆಲೆ ಬಾಳುವ ಒಂದು ಸೀರೆಯನ್ನು ತಕ್ಷಣವೇ ತೆಗೆದು ಕಿರಿಯ ರಾಣಿಗೆ ಕೊಟ್ಟು ಆಕೆಯನ್ನು ಸಂತೋಷಪಡಿಸಿದ.




ಈ ವಿಷಯ ಹೇಗೋ ಪಟ್ಟದ ರಾಣಿಯ ಕಿವಿಗೆ ಬಿತ್ತು. ರಾಜನಿಗೆ ತನ್ನ ಮೇಲೆ ಮಮತೆ ಇಲ್ಲ ಎಂಬ ವಿಷಯ ಆಕೆಗೂ ತಿಳಿದಿದೆ. ಆದರೂ ಸವತಿಗೆ ರಾಜನು ಅಂತಹ ಸುಂದರವಾದ ಸೀರೆ ಕೊಡುತ್ತಿದ್ದರೆ ತಾನು ನೋಡುತ್ತಾ ಸುಮ್ಮನೆ ಕೂಡುವಳೇ? ಆದ್ದರಿಂದ ಏನಾದರೂ ಆಗಲೀ ಎಂದುಕೊಂಡು "ಅಂತಹ ಸೀರೆ ನನಗೂ ಒಂದು ಕೊಂಡು ಕೊಡಬೇಕು" ಎಂದು ರಾಜನಿಗೆ ಸಮಾಚಾರ ತಲುಪಿಸಿದಳು. ಆದರೆ ರಾಜ ಆ ಸುದ್ದಿ ತಂದ ಪರಿಚಾರಿಕೆಯನ್ನು ಗದರಿಸಿ "ಓಹೋಹೊ, ಲಕ್ಷಣವಾಗಿದೆ! ಅವಳ ಜನ್ಮಕ್ಕೆ ಇಂತಹ ಸೀರೆಬೇಕೋ? ಈಗಿರೋವೇ ಸಾಕು ಅಂತ ಹೋಗಿ ಹೇಳು, ಹೂಂ" ಎಂದು ಅಟ್ಟೆ ಗದರಿಸಿ ಕಳುಹಿಸಿದ.

ದಾಸಿ ಬಂದು ಈ ವಿಷಯ ಹೇಳಿದ ಕೂಡಲೇ "ನನ್ನ ಗತಿ ಇಲ್ಲಿಗೆ ಬಂತೇ" ಎಂದುಕೊಂಡು ಪಟ್ಟದರಸಿ ಕೊರಗಿದಳು. ಆಗ ದಾಸಿಯರಲ್ಲಿ ಗಡಸುಗಾತಿಯೂ, ಬುದ್ಧಿವಂತಳೂ ಆದವಳೊಬ್ಬಳು ಅಲ್ಲಿಗೆ ಬಂದು ರಾಣಿಯೊಂದಿಗೆ "ದೇವಿ, ನೀವೇಕೆ ವಿಚಾರಿಸುವಿರಿ. ನಿಮಗೆ ಅಂತಹ ಸೀರೆ ಉಡಲೇಬೇಕೆಂಬ ಅಪೇಕ್ಷೆಯಾದರೆ ನಾನೊಂದು ಉಪಾಯ ಹೇಳುತ್ತೇನೆ. ಕೇಳಿ. 'ಆರು ಮಾಸಗಳಲ್ಲಿ ನಿನ್ನ ಒಡವೆ ನಿನಗೇ ಕೊಟ್ಟು ಬಿಡುತ್ತೇನೆ' ಎಂದು ಹೇಳಿ ಆ ವರ್ತಕನ ಹತ್ತಿರದಿಂದ ಎರವಲು ತರೋಣ...." ಎಂದು ಇನ್ನೂ ಏನೋ ಸಲಹೆ ಕೊಡುವವಳಿದ್ದಳು.



ಇದಕ್ಕೆ ಆ ದಾಸಿ ಶ್ಲೋಕ ರೂಪದಲ್ಲಿ ಹೀಗೆಂದು ಉತ್ತರಕೊಟ್ಟಳು ;

ಉತ್ತುಂಗಭುಜ ನಾಶೋ ವಾ
ದೇಶಕಾಲ ವಿಪರ್ಯಯಃ ॥
ವಣಿಗ್ವರ ವಿನಾಶೋ ವಾ
ನಂದೋ ರಾಜಾ ಭವಿಷ್ಯತಿ ॥

ಅಂದರೆ: ನಾವು ಅವಧಿ ಪಡೆದ ಆರು ತಿಂಗಳಲ್ಲಿ ಪ್ರಭುವಾದ ಉತ್ತುಂಗಭುಜ ಮಹಾರಾಜರು ಕಾಲವಾಗಲೂ ಬಹುದು. ದೇಶದಲ್ಲಿಯೂ, ಕಾಲದಲ್ಲಿಯೂ ಅನಿರೀಕ್ಷಿತವಾಗಿ ಬದಲಾವಣೆ ಬರಬಹುದು. ಈ ವರ್ತಕನೇ ಸಾಯುಬಹುದು. ಇಲ್ಲ ನಮ್ಮ ನಂದನೇ ರಾಜನಾಗಬಹುದು. ಯಾವ ನಿಮಿಷಕ್ಕೆ ಏನು ನಡೆಯುವುದೋ ಯಾರು ಹೇಳಬಲ್ಲರು?" ಎಂದು ಆ ಶ್ಲೋಕದ ಅರ್ಥ.

"ಲೇ, ನೀನು ಹೇಳಿದ ಉಪಾಯವೇನೋ ಸೊಗುಸಾಗಿಯೇ ಇದೆಕಣೆ. ನಾವು ಎರವಲು ಕೇಳಬಹುದು, ನಮ್ಮ ಮಾತು ನಂಬಿ ವರ್ತಕ ವಸ್ತು ಕೊಡಲೂ ಬಹುದು. ಆದರೆ ಎರವಲು ತೆಗೆದುಕೊಂಡ ತರುವಾಯ ಈ ಋಣ ತೀರಿಸುವ ಬಗೆಯಾದರೂ ಹೇಗೆ? ಒಬ್ಬರ ಋಣದಲ್ಲಿರುವುದು ತುಂಬಾ ಪಾಪವಲ್ಲವೇ? ಸಾಲ ಮಾಡಿ ಊಟ ಮಾಡುವುದಿಲ್ಲವೆನ್ನುವಂತೆ, ಋಣ ಮಾಡಿ ಸೀರೆ ಕೊಳ್ಳುವುದಕ್ಕಿಂತಲೂ ಬಡತನ ಅನುಭವಿಸುವುದೇ ಮೇಲು ಅಲ್ಲವೆ? ಮಹಾರಾಜರ ಅನುಗ್ರಹವೇ ನನಗಿಲ್ಲದಿರುವಾಗ ಸೀರೆ, ಒಡವೆಗಳು ಕಡಿಮೆಯಾದರೇನು?" ಎಂದು ತನ್ನ ದುಃಖವನ್ನು ಸಮಾಧಾನಮಾಡಿಕೊಂಡಳು.

ಆಗ ರಾಣಿ "ಎಲೈ ನೀನು ಹೇಳಿದ ಮಾತುಗಳೆಲ್ಲಾ ಸೊಗುಸಾಗಿವೆ. ಆದರೆ ಮಹಾರಾಜರನ್ನು ಕುರಿತು ಆಡಿದ ಮಾತು ಮಾತ್ರ ನನಗೆ ತುಂಬಾ ದುಃಖವನ್ನು ಉಂಟುಮಾಡಿದೆ. ಮಹಾರಾಜರೇ ಇಲ್ಲದೇ ಹೋದರೆ ಈ ಸೀರೆಗಳೇಕೆ? ವಸ್ತುವಾಹನಗಳೇಕೆ?" ಎಂದು ವಿರಕ್ತಳಾಗಿ ನುಡಿದಳು.

ಅದಕ್ಕೆ ಆ ದಾಸಿ "ತಾಯಿ, ಮಹಾರಾಜರು ಇರುವಷ್ಟು ದಿನ ನೀವು ಆ ಸೀರೆಯನ್ನು ಸುಖವಾಗಿ ಉಡಬಹುದು. ಒಂದು

వేళి అవరు గతిసిద్దే ఆదరె రాజ్య నిమ్మ కుమారన కైగె బరువుదరింద వర్తకన హణ కొట్టుబిడబహుదు. ఆ తరువాయ నిమ్మ సొసె ఈ సీరె ఉడబహుదు. అవరు బదుకి సుఖవాగిరువాగలూ మత్తె యావుదాదరొందు విధవాద బద లావణె బరబహుదు. ఆద్దరింద యావ రీతి ఆలోచిసిదరూ నీవు ఈ సీరె తరిసికొళ్ళువుదే ఉత్తమ అంత నన్న అభిప్రాయ" ఎందు హేళిదళు.

ದಾಸಿಯ ಮಾತುಗಳು ರಾಣಿಗೆ ರುಚಿಸಿದವು. ಅಷ್ಟೇ ಅಲ್ಲ. ಇಂತಹದೇ ಸೀರೆ ತನ್ನ ಸವತಿ ಕೊಂಡುಕೊಂಡು ತನಗೆ ಇಲ್ಲದಿದ್ದರೆ ಪ್ರಪಂಚದಲ್ಲಿ ತಲೆ ತಗ್ಗಿಸುವಂತಾಗುವುದೆಂಬ ಈ ಈರ್ಷೆ ಒಂದುಕಡೆ ಬಾಧಿಸುತಿತ್ತು. ಅದೂ ಅಲ್ಲದೆ ಸ್ತ್ರೀಯರಿಗೆ ಸಹಜವಾಗಿರುವ ಹಂಬಲದಿಂದ ತನ್ನ ಮನಸ್ಸನ್ನು ಗೆಲ್ಲಲಾರದೇ ಹೋದಳು. ಆರು ತಿಂಗಳಲ್ಲಿ ಬೆಲೆ ಕೊಟ್ಟು ಬಿಡುವೆವೆಂದು ಒಪ್ಪಿಸಿ ಮಗನ ಕೈಯಲ್ಲಿ ತಾಳೆಗರಿಯ ಮೇಲೆ ಪತ್ರ ಬರೆಸಿ ವರ್ತಕನಿಗೆ ಕೊಟ್ಟು ಕಳುಹಿಸಿ, ಆ ಸೀರೆ ಉಟ್ಟುಕೊಂಡಳು. ತನ್ನ ಅಭೀಷ್ಟ ನೆರವೇರಿದ ಪ್ರಯುಕ್ತ ಪಟ್ಟದರಸಿಗೆ ಹಿಡಿಸಲಾರದ ಸಂತೋಷ. ತಾಯಿಯ ಸಂಕಲ್ಪ ನೆರವೇರಿದುದಕ್ಕೆ ನಂದನೂ ಅಪಾರ ಆನಂದಗೊಂಡ. ತನ್ನ ಬುದ್ಧಿ ಚಾತುರ್ಯದಿಂದಲೇ ಅಲ್ಲವೇ ಮಹಾರಾಣಿಯವರ ಆಶೆ




ಈಡೇರಿತು ಎಂದು ದಾಸಿ ಹಿಗ್ಗಿ ಹೀರೇಕಾಯಿ ಆದಳು.

ಹೀಗೇ ಐದು ತಿಂಗಳು ಕಳೆಯಲು ದೈವವಶಾತ್ ಉತ್ತಂಗಭುಜನಿಗೆ ಕಾಯಿಲೆ ಬಂತು. ದಿವಸ ದಿವಸಕ್ಕೂ ಆ ವ್ಯಾಧಿ ಹೆಚ್ಚಾಯಿತೇ ಹೊರತು, ಇಳಿಮುಖವಾಗಲಿಲ್ಲ. ಅವಸಾನಕಾಲ ಸಮೀಪಿಸುತ್ತಿರುವುದೆಂದು ಗ್ರಹಿಸಿ ಮಹಾರಾಜನು ತನ್ನ ಮಂತ್ರಿಗಳನ್ನು ಬರಮಾಡಿಕೊಂಡ.

ಅವರೊಂದಿಗೆ "ಎಲೈ, ಮಂತ್ರಿವರ್ಯರೇ, ನನ್ನ ಅನಂತರ ನನ್ನ ಕಿರಿಯ ರಾಣಿಯ ಕುಮಾರನಿಗೇ ಪಟ್ಟ ಕಟ್ಟಿ. ಇದೇ ನನಗೆ ಉಳಿದಿರುವ ಕೋರಿಕೆ. ನನ್ನ ಈ ಕೋರಿಕೆಯನ್ನು ನೆರವೇರಿಸುವಿರೆಂಬ ನಂಬಿಕೆಯಿಂದ,

ತೃಪ್ತಿಯಿಂದ ನಾನು ಪರಲೋಕಕ್ಕೆ ಹೋಗುತ್ತಿರುವೆನು" ಎಂದು ಹೇಳಿದ. ಕೆಲವು ಕಾಲದಲ್ಲೇ ಆತನು ಮರಣಹೊಂದಿದ.

ಮಹಾರಾಜನು ಮರಣವಾದ ತರುವಾಯ ಮಂತ್ರಿಗಳೆಲ್ಲರೂ ಒಂದೆಡೆ ಸೇರಿ ಆಲೋಚಿಸಿದರು. ರಾಜನ ಕೋರಿಕೆ ನೆರವೇರಿಸುವುದು ಸಾಧುವೆಂದು ಕಂಡುಬರಲಿಲ್ಲ. ಏಕೆಂದರೆ ನಂದ ಪಟ್ಟದರಸಿಗೆ ಹುಟ್ಟಿದ ಜೇಷ್ಠ ಪುತ್ರ. ಧರ್ಮ ಶಾಸ್ತ್ರಗಳೆಲ್ಲಾ ಆತನ ಪಕ್ಷವೇ ಹೇಳುವುದು ಅಲ್ಲದೆ, ಪ್ರಜೆಗಳೆಲ್ಲರಿಗೂ ಆತನ ಮೇಲೆ ಪ್ರೀತಿಯಿದೆ. ಅಷ್ಟೇ ಅಲ್ಲ; ವಿದ್ಯೆ, ವಿನಯ, ಔದಾರ್ಯ ಮುಂತಾದ ಸುಗುಣಗಳೆಲ್ಲವೂ ನಂದನಿಗೆ ಇವೆ. ಇವಿಷ್ಟು ಸುಗುಣಗಳನ್ನು ತಳ್ಳಿಹಾಕಿ ರಾಜನ ಕೋರಿಕೆ ನೆರವೇರಿಸುವುದಾದರೂ ಹೇಗೆ? ಆದ್ದರಿಂದ ನಂದನೇ ತಕ್ಕವನೆಂದು ನಿಶ್ಚಯಿಸಿ ಆತನಿಗೆ ಪಟ್ಟ ಕಟ್ಟಿದರು.

ನಂದನು ಪಟ್ಟಾಭಿಷಕ್ತನಾದ ಕೂಡಲೇ ಮೊಟ್ಟ ಮೊದಲು ತಾಯಿಗೆ ಸೀರೆ ಕೊಟ್ಟ ವರ್ತಕನನ್ನು ಕರೆಯಿಸಿ, ಸೀರೆಯ ಬೆಲೆ ಸಾವಿರ ವರಹಗಳನ್ನು ಕೊಟ್ಟುಬಿಟ್ಟ. ತನ್ನ ಮೇಲೆ ನಂಬಿಕೆಯಿಟ್ಟದ್ದಕ್ಕೆ ಮತ್ತೊಂದು ಸಾವಿರ ವರಹ ಬಹುಮಾನವಾಗಿ ಕೊಟ್ಟ.

ಈ ವಿಧವಾಗಿ ಬುದ್ಧಿ ಚಾತುರ್ಯವುಳ್ಳ ಆ ದಾಸಿಯ ಮಾತು ಸಫಲಹೊಂದಿ, ನಂದ ಮಹಾರಾಜನಾದ. ಪಟ್ಟದ ರಾಣಿಗೆ ದಾಸಿ ಹೇಳಿದ ಶ್ಲೋಕ ಗೂಡಾರ್ಥವುಳ್ಳದಾಗಿದ್ದುದರಿಂದಲೇ ಇಂದಿಗೂ ಅದು ಒಂದು ಗಾದೆಯಾಗಿ ನಿಂತು ಹೋಯಿತು.

'ಏನೋ, ಯಾವ ನಿಮಿಷದಲ್ಲಿ ಏನು ನಡೆಯುವುದೋ' ಎಂದು ಮುಂದೆ ಬರುವ ಆಗುಹೋಗುಗಳನ್ನು ಕುರಿತು ನಮಗೆ ಸ್ಪಷ್ಟವಾಗಿ ತಿಳಿಯದು' ಎಂದು ಹೇಳ ಬೇಕಾದಾಗ 'ನಂದೋರಾಜಾ ಭವಿಷ್ಯತಿ' ಎಂದು ಹೇಳುವುದು ಇಂದಿಗೂ ಬಳಕೆಯಲ್ಲಿದೆ.



# ಮುಳ್ಳು ಹಂದಿಗೆ ಮೈಯೆಲ್ಲಾ ಮುಳ್ಳು



## ಏಕೆ-ಗೊತ್ತೆ?

ಪಂಚಪಾಂಡವರಲ್ಲಿ ಮೂರನೆಯವನಾದ ಅರ್ಜುನನು ಒಂದು ಸಾರಿ ಪಾಶುಪತಾಸ್ತ್ರಕ್ಕಾಗಿ ಪರಮೇಶ್ವರನನ್ನು ಕುರಿತು ಉಗ್ರ ತಪಸ್ಸು ಮಾಡುತ್ತಿದ್ದ. ಆತನ ತಪಸ್ಸಿಗೆ ಮೆಚ್ಚಿದ ಈಶ್ವರನು ಅರ್ಜುನನಿಗೆ ಪ್ರತ್ಯಕ್ಷನಾಗಿ ಅಸ್ತ್ರವನ್ನು ಕೊಟ್ಟು ಬರೋಣವೆಂದು ಭೂಲೋಕಕ್ಕೆ ಹೊರಟ. ಈ ವಿಷಯ ಪಾರ್ವತಿಗೆ ತಿಳಿದು "ನಾಥಾ, ನಾನೂ ನಿಮ್ಮೊಂದಿಗೆ ಬರುತ್ತೇನೆ. ಅರ್ಜುನನು ಪರಾಕ್ರಮಿಯೆಂತಲೂ, ಧನುರ್ವಿದ್ಯೆಯಲ್ಲಿ ಪ್ರವೀಣನೆಂತಲೂ ಹೇಳುವರು. ಆ ಪರಾಕ್ರಮವೇನೋ, ಆತನ ಶೌರ್ಯವೇನೋ ನೋಡೋಣ ವೆಂದಿದ್ದೇನೆ." ಎಂದು ಹೇಳಿದಳು. ಶಂಕರ 'ಸರಿ' ಎಂದ.

ಪಾರ್ವತಿ ಪರಮೇಶ್ವರರು ತಮ್ಮ ಪರಿವಾರದೊಂದಿಗೆ ಕಿರಾತ ರೂಪವನ್ನು ಧರಿಸಿ, ಅರ್ಜುನನು ತಪಸ್ಸು ಮಾಡುತ್ತಿದ್ದ ಅರಣ್ಯ ಪ್ರವೇಶ ಮಾಡಿದರು. ಅಲ್ಲಿ ಒಂದು ಹಂದಿ ಕಾಣಿಸಲು ಆ ಪರಿವಾರದರು ಅದನ್ನು ಅಟ್ಟಿಸಿಕೊಂಡು ಹೋದರು. ಆ ಹಂದಿ ಗರ್ಭಿಣಿಯಾಗಿತ್ತು. ಅದು ಗುರುಗುಟ್ಟುತ್ತಾ ಅರ್ಜುನನ ಆಶ್ರಮದ ಸಮೀಪಕ್ಕೆ ಓಡಿತು. ಆ ಹಂದಿಯ ಗುರುಗುಟ್ಟುವಿಕೆ, ಬೇಟೆಗಾರರು ಮಾಡುತ್ತಿದ್ದ ಗಲಭೆಗೆ ತಪೋನಿಷ್ಠೆಯಲ್ಲಿದ್ದ ಅರ್ಜುನ ಎದ್ದು ಕೋಪದಿಂದ ಗಾಂಢೀವ ಹಿಡಿದು ಆ ಹಂದಿಯ ಮೇಲೆ ಶರವರ್ಷ ಸುರಿಸಿದ. ಅತಿದಪ್ಪ ಚರ್ಮವಾದುದರಿಂದ ಆ ಬಾಣಗಳೆಲ್ಲವೂ ಹೋಗಿ ಅದರ ಶರೀರಕ್ಕೆ ನಾಟಿಕೊಂಡವು.

ಈ ರೀತಿ ನಡೆಯುವ ವೇಳೆಗೆ ಕಿರಾತರ ರೂಪದಲ್ಲಿದ್ದ ಪಾರ್ವತಿ ಪರಮೇಶ್ವರರು ಅಲ್ಲಿಗೆ ಬಂದರು. "ನನ್ನ ಪರಿವಾರವು ಬೇಟೆಯಾಡುತ್ತಿದ್ದ ಹಂದಿಯ ಮೇಲೆ ಬಾಣಬಿಡಲು ನೀನು ಯಾರು?" ಎಂದ ಶಂಕರ.

ಅದಕ್ಕೆ ಅರ್ಜುನ "ಓಹೋ, ಮಹಾ ದೊಡ್ಡ ಪ್ರಶ್ನೆ ಹಾಕಿದೆ. ತಪೋಭಂಗ ಮಾಡಲು ಬಂದ ಮೃಗವನ್ನು ಸಾಯಿಸದೆ ಸುಮ್ಮನಿರುವರೆ?" ಎಂದು ಉತ್ತರ ಹೇಳಿದ. ಮಾತಿಗೆ ಮಾತು ಬೆಳೆದು, ಕಲಹ ಪ್ರಾರಂಭವಾಯಿತು. ಕ್ರಮೇಣ ಅದು ಯುದ್ಧ ರೂಪ

ವಾಗಿ ಪರಿಣಮಿಸಿತು. ಆ ಯುದ್ಧದಲ್ಲಿ ಸವ್ಯಸಾಚಿಯು ತನ್ನ ಗಾಂಢೀವವನ್ನು ಅನೇಕ ವಿಧಗಳಲ್ಲಿ ಪ್ರಯೋಗ ಮಾಡಲು ಆತನ ಧನುರ್ವಿದ್ಯಾ ಸಾಮರ್ಥ್ಯವನ್ನು ಪಾರ್ವತಿ ಕಣ್ಣಾರೆ ಕಂಡು ಸಂತೋಷಪಟ್ಟಳು. ಆಗ ಕಿರಾತನ ರೂಪದಲ್ಲಿದ್ದ ಈಶ್ವರ, ಯುದ್ಧವನ್ನು ನಿಲ್ಲಿಸಿ, ತನ್ನ ನಿಜ ರೂಪದಲ್ಲಿ ಪ್ರತ್ಯಕ್ಷನಾಗಿ, ತಮ್ಮ ಸಂಕಲ್ಪವನ್ನು ಬಯಲು ಮಾಡಲು ಅರ್ಜುನನು ಸಂತೋಷಗೊಂಡನು.

ಆ ಸಮಯದಲ್ಲಿ ಅವಿತಿಟ್ಟುಕೊಂಡಿದ್ದಹಂದಿ ಪಾಪ ಪ್ರಸವ ವೇದನೆ ಮತ್ತು ಮರಣವೇದನೆ ಅನುಭವಿಸುತ್ತಾ ಕೊರಗುತಿತ್ತು. ಅದನ್ನು ನೋಡಿ ಪಾರ್ವತಿಗೆ ಮರುಕವುಂಟಾಯಿತು. ಆಕೆಯೊಂದಿಗೆ ಆ ಹಂದಿ "ತಾಯಿ, ಬಾಣದ ಏಟು ಬಿದ್ದು ನನ್ನ ಹೊಟ್ಟೆಯಲ್ಲಿರುವ ಮರಿಗಳೆಲ್ಲಾ ಸಾಯುತ್ತಿವೆ. ಇನ್ನು ನಾನುಮಾತ್ರ ಬದುಕಿ ಏನು ಮಾಡಬೇಕು. ಆದ್ದರಿಂದ ದಯಮಾಡಿ ಈ ಶರಗಳನ್ನು ಶರೀರದಿಂದ ಕಿತ್ತು ಹಾಕಿಬಿಟ್ಟರೆ, ಕೂಡಲೇ ನನ್ನ ಪ್ರಾಣ ಹೋಗುತ್ತದೆ. ತೊಂದರೆ ತಪ್ಪುತ್ತೆ. ಈ ಉಪಕಾರಮಾಡಿ ಪುಣ್ಯಕಟ್ಟಿಕೊ, ತಾಯಿ" ಎಂದು ದೈನ್ಯದಿಂದ ಪ್ರಾರ್ಥಿಸಿತು.

ಆಗ ಪರಮೇಶ್ವರನು ಅದರೊಂದಿಗೆ "ಎಲೈ ಸೂಕರವೇ, ನಿನ್ನ ಶರೀರಕ್ಕೆ ನಾಟಿಕೊಂಡಿರುವ ಶರಗಳೇನೂ ಸಾಮಾನ್ಯವಲ್ಲ. ಅವು ಅರ್ಜುನನ ಗಾಂಡೀವದಿಂದ ಬಂದ ಅಮೋಘ ಶರಗಳು. ಅವುಗಳನ್ನು ಕಿತ್ತರೆ ನಿನಗೆ ಅಪಾಯ. ಆದುದರಿಂದ ಅವನ್ನು ನಿನ್ನ ಶರೀರಕ್ಕೆ ಸೊಗಸು ಕೊಡುವಂತೆ ಸಹಜ ಸಿದ್ಧವಾದ ಮೊನಚಾದ ಮುಳ್ಳುಗಳಾಗಿ ಬದಲಾಯಿಸುವೆನು. ಇನ್ನು ಮುಂದೆ ನಿನ್ನದು 'ಮುಳ್ಳು ಹಂದಿ' ಎಂಬ ಪ್ರತ್ಯೇಕ ಜಾತಿಯಾಗುತ್ತದೆ. ಈ ಮುಳ್ಳುಗಳು ನಿನಗೆ ಅಂದವನ್ನು ಕೊಡುವುದುಮಾತ್ರವೇ ಅಲ್ಲದೆ ಸ್ವರಕ್ಷಣೆಗೆ ಸಹಾಯವಾಗುವಂತೆ ಒಂದು ಕವಚವಾಗಿಯೂ ಸಹ ಉಪಯೋಗವಾಗುತ್ತದೆ. ಆದ್ದರಿಂದ ನಿನಗೂ ನಿನ್ನ ಮರಿಗಳಿಗೂ ಏನೂ ಭಯವಿಲ್ಲ." ಎಂದು ಸ್ವಲ್ಪ ಗಂಗಾ ಜಲವನ್ನು ಅದರ ಮೇಲೆ ಚಿಮುಕಿಸಲು, ಅದು ಸುಖವಾಗಿ ಪ್ರಸವಿಸಿತು. ಪರಮೇಶ್ವರನ ವರದಿಂದ ಆ ಹಂದಿ ಮರಿಗಳೆಲ್ಲಾ ಮುಳ್ಳುಗಳಿಂದಲೇ ಜನಿಸಿದವು. ಮುಳ್ಳು ಹಂದಿಯಜಾತಿ ಈ ರೀತಿ ಸೃಷ್ಟಿಸಲ್ಪಟ್ಟಿತು.



## ಆನೆ

ಆನೆ! ಆನೆ! ಆನೆ!
ಅಂಬಾರಿಯ ಆನೆ!
ಸೊಂಡಿಲಿನ ಆನೆ!
ಸೋಜಿಗದ ಆನೆ!
ಅಡವಿಯಲ್ಲಿ ಬಾವಿಯಾ
ಅಡಿಗೆ ಬಿದ್ದ ಆನೆ!
ಹಿಡಿದ ಮೇಲೆ ಗೂಡಿನಲ್ಲಿ
ಬುದ್ಧಿ ಕಲಿತ ಆನೆ!
ಮಾವಟಿಗನ ಅಂಕುಶಕ್ಕೆ
ಹೆದರುವಂತ ಆನೆ!
ಮಾವಟಿಗ ಹೇಳಿದಂತೆ
ಕೇಳುವಂತ ಆನೆ!
ಸೊಪ್ಪುಕಬ್ಬು ಅಕ್ಕಿಕಾಯಿ
ಸೆಳೆದು ತಿಂಬ ಆನೆ!
ಸೊಂಡಿಲಲಿ ನೀರುಹೀರಿ
ಸುರಿದುಕೊಂಬ ಆನೆ!
ಕಿರೀ ಕಣ್ಣು, ಹಿರೀ ಹೊಟ್ಟೆ
ಕಂಬಾ ಕಾಲಿನಾನೆ!
ಮೊರಾ ಕಿವಿ, ಕೋರೆದಾಡೆ
ಗಣಗಣ ಗಂಟೆಯಾನೆ!
ಮರವ ಎಳೆದು ಕೋಟೆಯೊಡೆದು
ಹೊರೆಯ ಹೊರುವ ಆನೆ!
ಬೇಟೆಯಾಡಿ ಗೆದ್ದು ಬರುವ
ರಾಜ ಪಟ್ಟದಾನೆ!

—"ನವಗಿರಿನಂದ"

## ಒಗಟುಗಳು

1. ನೋಡಲು ಬರದು
ಹಿಡಿದರೆ ಸಿಗದು
ಕಿವಿಯೊಳಗಿಳಿಯುವದೇನಣ್ಣಾ ?
2. ಬಿಳಿಮುಗಿಲಿನಲಿ
ಕರಿತಾರೆಗಳು
ಬಲ್ಲವರೆಣಿಸುವರೇನಣ್ಣಾ ?
3. ತಲೆಯಲ್ಲಾಡಿಸಿ
ತನುವನೆ ತೂಗಿಸಿ
ಕುಣಿಸುವದೇನದು ಹೇಳಣ್ಣಾ !
4. ವಿಷವಾಗಿರುತಿಹ,
ರಸವನೆ ಕೊಡುವರು,
ಕುಡಿದವರುಳಿಯುವರೇನಣ್ಣಾ !
5. ಮರದಿಂದಿಳಿದು
ಧರೆಯೊಳು ಬರಲು
ಕರೆದೊಯ್ಯುವರು ಮನೆಮನೆಗೆ,
ಅಲ್ಲಿಹರಿಬ್ಬರು
ಗೆಳೆಯರುಕೂಡಲು
ಕಳೆತರುವೆಲ್ಲರಧರಗಳಿಗೇ.

—ಹೊ. ವಿ. ಬ್ಯಾಳಿಯವರ.

6. ಕೂತುಕೊಂಡು ಹಚ್ಚೋದು.
ಬಗ್ಗಿಕೊಂಡು ಇಕ್ಕೋದು.
7. ವರ್ಷಕ್ಕೊಂದು ಹಣ್ಣು;
ಹಣ್ಣಿಗೆ ಹನ್ನೆರಡು ಹೋಳು;
ಹೋಳಿಗೆ ಮುವ್ವತ್ತು ಬೀಜ;
ಹದಿನೈದು ಕಪ್ಪು, ಹದಿನೈದು ಬಿಳಿಪು.

—ಆರ್. ಶೇಖರ್.

---

## ಚುಟುಕ

—ಪೂರವಿರಾವ್.

ದಡದ ಆಚೆ ಕುರಿ;
ನೀರ ಬಳಿಯೆ ನರಿ;
ಮಧ್ಯದಲ್ಲಿ
ಸದ್ದಿನಲ್ಲಿ
ಹಾಯುತಿತ್ತು ಝುರಿ.

## ★ 'ಒಂದು ನಿಮಿಷ—ಇಗೋ ಬಂದೆ' ★

ಸರಳೆಗೆ ಚಿಕ್ಕಂದಿನಿಂದ ಒಂದು ಕೆಟ್ಟ ಅಭ್ಯಾಸ ಬಂದಿತ್ತು. ತಾಯಿ ಏನಾದರೂ ಕೆಲಸ ಹೇಳಿದರೆ, 'ಇಗೋಮ್ಮ, ಒಂದು ನಿಮಿಷ—ಬಂದು ಬಿಟ್ಟೆ' ಎನ್ನುವಳು. 'ಮೇಲೆ ಬಟ್ಟೆ ಇದೆ ತೊಗೊಂಡು ಬಾ' ಎಂದರೆ 'ಇಗೋಮ್ಮ ಒಂದು ನಿಮಿಷ—ತಂದೆ' ಎನ್ನುವಳು. 'ಊಟಕ್ಕೆ ಬಾರೇ' ಎಂದರೆ 'ಒಂದು ನಿಮಿಷ ಬಂದೆ.' 'ಸ್ಕೂಲಿಗೆ ಹೊತ್ತಾಯಿತು—ಜಡೇಗೆ ಬಾರೇ' ಎಂದರೆ 'ಇಗೋ ಒಂದು ನಿಮಿಷ'—ಇದೇ ಅವಳಿಗೆ ರೂಢಿಯಾಗಿ ಹೋಗಿತ್ತು.

ಅವಳ ಹುಟ್ಟಿದ ಹಬ್ಬದ ದಿವಸ ಅವಳ ತಂದೆ ಅವಳಿಗೆ ಒಂದು ಪುಟ್ಟ ಗಿಣಿ ಮರಿಯನ್ನು ತಂದುಕೊಟ್ಟರು. ಅದು ಬಲುಮುದ್ದಾಗಿ ಮಾತಾಡುತ್ತಿತ್ತು. ಅದನ್ನು ಕಂಡರೆ ಅವಳಿಗೆ ಬಹು ಪ್ರೀತಿ. ಅದನ್ನು ಎಲ್ಲಿಡಲೂ ಇಷ್ಟವಿಲ್ಲ. ರಾತ್ರಿ ಪಕ್ಕದಲ್ಲೇ ಇಟ್ಟುಕೊಂಡು ನಿದ್ದೆ ಮಾಡುವಳು.

ಒಂದು ದಿನ ಕಸೂತಿ ಹಾಕುತ್ತಾ ಇದ್ದಳು ಸರಳೆ. ಅವಳ ತಾಯಿ, 'ಲೇ ಸರಳ, ಗಿಣಿ ಈಚೇ ಬಂದಿದೆ. ಯಾರೂ ಇಲ್ಲ ಬಂದು ತೊಗೊಂಡು ಹೋಗು' ಎಂದು ಕೂಗಿ ಹೇಳಿದರು. ಸರಳೆ 'ಇಗೋಮ್ಮ ಒಂದು ನಿಮಿಷ, ಎರಡೇ ಎರಡು ಗಂಟು ಹಾಕಿಬಂದೆ' ಎಂದು ಇನ್ನೆರಡು ಎಸಳು ಹಾಕಲು ಕುಳಿತಳು. ಅದನ್ನು ಮುಗಿಸುವಷ್ಟರಲ್ಲಿ ಗಿಣಿ ಕಿರಿಚಿಕೊಂಡಿತು. ಸರಳೆ ಹೋಗಿ ನೋಡುವಲ್ಲಿ ಬೆಕ್ಕು ಅದರ ಕತ್ತು ಕಚ್ಚಿತ್ತು. ಸರಳೆಯನ್ನು ನೋಡಿ ಬೆಕ್ಕು ಗಿಣಿಯನ್ನು ಬಿಸುಟು ಓಡಿ ಹೋಯಿತು. ಸರಳೆ ಗಿಣಿಯನ್ನು ಕೈಗೆ ತೆಗೆದು ನೋಡುತ್ತಾಳೆ, ಪಾಪ! ಗಿಣಿ ಸತ್ತು ಹೋಗಿದೆ. ಸರಳೆಗೆ ಬಿಕ್ಕಿ ಬಿಕ್ಕಿ ಅಳುವಷ್ಟು ದಃಖವಾಯಿತು. ಅವಳ ತಾಯಿ, ಅಳುತ್ತಿದ್ದ ಸರಳೆಗೆ, "ಸರಳೆ, ನಾನು ಹೇಳಿದ ತಕ್ಷಣ ಗಿಣಿಯನ್ನು ತೆಗೆದುಕೊಂಡು ಹೋಗಿದ್ದಿದ್ದರೆ ಅದು ಸಾಯುತ್ತಿತ್ತೆ? 'ಒಂದು ನಿಮಿಷ' ಅಂದೆ ನೋಡು. ಒಂದುನಿಮಿಷದಲ್ಲಿ ಎಷ್ಟು ಕೆಲಸ ಆಗಿಹೋಗಿದೆ" ಎಂದರು. ಸರಳೆ ಬಿಕ್ಕಿ ಬಿಕ್ಕಿ ಅಳುವುದನ್ನು ಮಾತ್ರ ನಿಲ್ಲಿಸಲಿಲ್ಲ.

ಯಾವಾಗಲೂ ದೊಡ್ಡವರು ಹೇಳಿದ ಕೆಲಸವನ್ನು ಜಾಗ್ರತೆ ಮಾಡುವುದು ಒಳ್ಳೆಯ ಪದ್ಧತಿ.

—ತೊ. ಸು. ಲೂಟಕೂರ್.



ಕಳ್ಳನ ಪತ್ತೆ:—ಮೇಲೆ 1ರಿಂದ ಹಿಡಿದು ಕ್ರಮವಾಗಿ 51ರವರೆಗೆ ನಂಬರಿನ ಪ್ರಕಾರ ಚುಕ್ಕೆಗಳನ್ನು ಗೆರೆ ಎಳೆದು ಸೇರಿಸಿದರೆ ನಿಮಗೆ ಮರೆಸಿಕೊಂಡಿರುವ ಕಳ್ಳ ಸಿಕ್ಕಿಬೀಳುವನು.

## ನಗೆ—ಹನಿ

ಗಂಡ—ಲೇ, ಈ ರೊಟ್ಟಿಗೆ ವಾಸನೆ ಬರುತ್ತಲ್ಲೇ! ಇದೇನೆ?

ಹೆಂಡತಿ—ಇರುವೆ ಮುತ್ತುತ್ತೆ ಎಂತ ಡಿ. ಡಿ. ಟಿ. ಸ್ಪ್ರೇಮಾಡಿ ಇಟ್ಟಿದ್ದೇನೆ.

• • •

ಅಧಿಕಾರಿ—ಇದೇನಯ್ಯಾ, ನಿಮ್ಮ ಮನೇಲಿ ಇಷ್ಟೊಂದು ಭತ್ತ ಕೂಡಿಟ್ಟಿದ್ದೀಯಾ? ಎಲ್ಲಿಂದ ಬಂತು? ಬ್ಲಾಕ್ ಮಾರ್ಕೆಟ್ಟೋ?

ಯಜಮಾನ- ಅದನ್ನೆಲ್ಲಾ ರೇಷನ್ ಅಕ್ಕಿಯಿಂದ ಆರಿಸಿ ಸೇರಿಸಿಟ್ಟಿದ್ದು ಸ್ವಾಮಿ!

—ಕೆ. ಚಂದ್ರಶೇಖರರಾವ್.

## ನಿಮಗಿದು ಗೊತ್ತೆ ?

1. ಚಿತ್ರಿಸಲು ಬಾರದ ಚಿತ್ರವಾವುದು ?
2. ನೋಡಲು ಸಿಗದ ದೇಹವಾವುದು ?

—ವೆಂಕಟೇಶ, ಮುಧೋಳ.

3. ಶಿಷ್ಯನಿಲ್ಲದ ಗುರು ಯಾರು ?
4. ಪತ್ನಿ ಇಲ್ಲದ ಪತಿ ಯಾರು ?
5. ಜನರಿಲ್ಲದ ಪುರ ಯಾವುದು ?

—ಎಸ್. ಆರ್ ಕಾಸರಗೋಡ.

## ಗಾದೆಗಳು—ನೀತಿ

74. ನಯವಿದ್ದಲ್ಲಿ ಭಯವಿಲ್ಲ
75. ಮನಸ್ಸ ಗೆದ್ದರೆ ಮೂರು ಲೋಕ ಗೆದ್ದಂತೆ.
76. ಹಿತವಾಗಿ ಮಾತಾಡು, ಮಿತವಾಗಿ ಊಟ ಮಾಡು.
77. ಐಕಮತ್ಯವೇ ಲೋಕಹಿತವು.
78. ಎಲ್ಲವೂ ಒಳ್ಳೆಯದಕ್ಕೆ.
79. ಅತಿ ಹೆಚ್ಚಾದರೆ ಅಮೃತವೂ ವಿಷವೆ.
80. ಮನವೇ ಗಂಗೆ ಮನೆಯೇ ಕಾಶಿ.
81. ಲಂಘನಂ ಪರಮೌಷಧಂ.
82. ಒಪ್ಪೊತ್ತುಂಡವ ಯೋಗಿ, ಎರಡೊತ್ತುಂಡವ ಭೋಗಿ, ಮೂರೊತ್ತುಂಡವ ರೋಗಿ, ನಾಲ್ಕೊತ್ತುಂಡವನ ಹೊತ್ಕೊಂಡು ಹೋಗಿ.
83. ಅಪತ್ತಿಗಾದವನೇ ಆಪ್ತ.
84. ನಕ್ಕು ಮಾಡಿದ ತಪ್ಪನ್ನು ಅತ್ತು ಅನುಭವಿಸುವಿ.
85. ಗುಣವಂತನೇ ಹಣವಂತ.
86. ಪೂರ್ಣ ಪ್ರೇಮವೇ ಪ್ರಬಲ ಆತ್ಮಬಲ.
87. ಕಣ್ಣಿಂದಲೇ ಪಾಪ; ಕಣ್ಣಿಂದಲೇ ಪುಣ್ಯ.
88. ಸಿರಿಯ ಮೆಚ್ಚಿ ಮೆರೆಯದಿರು ; ಬರಿಯ ಹೊತ್ತು ಕಳೆಯದಿರು.
89. ಸಂಕಲ್ಪವಿಲ್ಲದ ಜೀವನ ವ್ಯರ್ಥ.
90. ನಿಯಮಗಳಿಗೆ ಅಪವಾದಗಳುಂಟು.
91. ಪಾಪಿಯ ಕಣ್ಣಿಗೆ ರೂಪುಳ್ಳ ವಸ್ತು ತೋರಬಾರದು.
92. ಬಣ್ಣದ ತಟ್ಟೆಗೆ ಮರುಳಾಗಿ ಸುಣ್ಣದ ಗೋಡೆ ಕೆಡವಬಾರದು.
93. ಬಾಲವಿದ್ಯೆ ಬೆಳಗಿನ ಪಯಣ ಒಳ್ಳೆಯದು.
94. ತಾಗಿ ಬಾಗುವುದಕ್ಕಿಂತ ಬಾಗಿ ನಡೆವುದೇ ಲೇಸು
95. ಕಿಡಿ ಸಣ್ಣದಾದರೂ ಕಾಡನ್ನು ಸುಟ್ಟೀತು.
96. ಹಾಲಿದ್ದಾಗಲೇ ಹಬ್ಬ.
97. ಎಲ್ಲರನ್ನೂ ಮೆಚ್ಚಿಸುವುದು ಮೂಢತನ.

## ಕೆಲಸ : ಕಾಯಕ

45. ದುಡಿತವು ದುಡ್ಡಿನ ತಾಯಿ.
46. ತಾನೂ ಮಾಡ, ಮಾಡುವವರಿಗೂ ಬಿಡ.
47. ಉದ್ಯೋಗದಂತಹ ಬಂಧುವಿಲ್ಲ; ಆಲಸ್ಯದಂತಹ ಶತ್ರುವಿಲ್ಲ.
48. ಧೈರ್ಯವಿದ್ದವರಿಗೆ ದೈವಬಲವುಂಟು.
49. ದುಡಿವವರಿಗೆ ದುಃಖವಿಲ್ಲ. ಸೋಮಾರಿಗೆ ಸುಖವಿಲ್ಲ.
50 ನಾಳೆ ಎಂದವನ ಬಾಳು ಹಾಳು.
51. ಬುದ್ಧಿವಂತನೇ ಬಲವಂತ.
52. ಮನಸ್ಸಿದ್ದಲ್ಲಿ ಮಾರ್ಗವುಂಟು
53. ನಿರುದ್ಯೋಗ ಕೆಟ್ಟನಡತೆಗೆ ತಂದೆ.
54. ಅರೆಗೆಲಸದಲ್ಲಿ ಅರಸನಿಗೂ ತೋರಿಸಬೇಡ.
55. ಕುಂಬಾರನಿಗೆ ವರುಷ ದೊಣ್ಣೆಗೆ ನಿಮಿಷ.
56. ಹೆತ್ತು ಸಾಕಬೇಕು; ಉತ್ತು ಬೆಳೆಸಬೇಕು.
57. ಎಲ್ಲಾ ಮಾಡುವುದು ಚೂರು ಬಟ್ಟೆಗಾಗಿ, ಗೇಣು ಹೊಟ್ಟೆಗಾಗಿ.
58. ಆಳಾಗಬಲ್ಲವ ಅರಸಾಗಬಲ್ಲ.
59. ಕೆಲಸ ಮಾಡುವವರಿಗೆ ಆಳು ಬೇಡ. ಅಡಿಗೆ ಮಾಡುವವರಿಗೆ ಹೆಂಡತಿ ಬೇಡ.
60. ಕೈಲಾಗದವ ಮೈಪರಚಿಕೊಂಡ.
61. ಜೇನ ಗಳಿಸಿದುದನ್ನು ಜಾಣ ಉಂಡ.
62. ಆತುರಗಾರನಿಗೆ ಬುದ್ಧಿ ಮಟ್ಟ.

# ಚಿನ್ನದಕೊಡ

ಒಂದಾನೊಂದು ಕಾಲಕ್ಕೆ ಒಬ್ಬ ವೃದ್ಧನಾದ ಪಂಡಿತನಿದ್ದನು. ಅವನಿಗೆ ಮೂರು ಜನ ಮಕ್ಕಳು. ಆ ಮೂರು ಜನ ಮಕ್ಕಳೂ ಕೇವಲ ಭೋಜನ ಪ್ರಿಯರು, ಹಾಗು ಆಲಸಿಗಳಲ್ಲಿ ಅಗ್ರಗಣ್ಯರು. ಸ್ವಂತ ಹೊಲವಿದ್ದರೂ ಮೈಬಗ್ಗಿ ಕೆಲಸ ಮಾಡಿ ಬೆಳೆಬಿತ್ತಡೆ, ಉಂಡು ತಿಂದು ಅಲೆದಾಡುತ್ತಿದ್ದರು. ಇಂಥಹ ಆಲಸಿಗಳನ್ನು ಹೇಗೆ ಸುಮಾರ್ಗಕ್ಕೆ ಹಚ್ಚಬೇಕೆಂಬುದೇ ತಂದೆಯ ನಿರಂತರ ಚಿಂತೆ.

ಹೀಗಿರುವಾಗ್ಗೆ ಒಂದುದಿನ ವೃದ್ಧನಿಗೆ ಅವಸಾನಕಾಲ ಪ್ರಾಪ್ತವಾಯಿತು. ಆಗ ಆತನು ತನ್ನ ಪುತ್ರರನ್ನು ಕರೆದು "ನನಗಂತೂ ಅವಸಾನಕಾಲವು ತೀರ ಸಮೀಪಿಸಿದೆ. ನೀವು ಚೆನ್ನಾಗಿ ಬಾಳಬೇಕಾದರೆ ನಾನು ಹೇಳುವ ಮಾತು ಸಾವಧಾನದಿಂದ ಲಕ್ಷ್ಯಗೊಟ್ಟು ಕೇಳಿರಿ. ನಮ್ಮ ಹೊಲದಲ್ಲಿ ಚಿನ್ನದಿಂದ ತುಂಬಿದ ಒಂದು ಚಿನ್ನದಕೊಡವನ್ನು ಬಹಳದಿನಗಳಿಂದ ಹೂಳಿಟ್ಟಿದ್ದೇನೆ. ಮುಪ್ಪಾದ ಕಾರಣ ನಿಶ್ಚಿತ ಸ್ಥಾನವು ನನಗೆ ಮರೆತುಹೋಗಿದೆ. ಆದರೆ ದ್ರವ್ಯವು ಮಾತ್ರ ಹೊಲದಲ್ಲಿ ಸುರಕ್ಷಿತವಾಗಿದೆ. ಅದನ್ನು ಅಗೆದು ಪತ್ತೆಹಚ್ಚಿ ಮೂರು ಜನವೂ ಸಮವಾಗಿ ಹಂಚಿಕೊಳ್ಳಿ" ಎಂದು ಈ ಪ್ರಕಾರ ಅತಿ ಕಷ್ಟದಿಂದ ಹೇಳಿ ಪಂಡಿತನು ಪರಲೋಕಕ್ಕೆ ತೆರಳಿದನು.

ಆ ಮೂರು ಜನ ಅಣ್ಣತಮ್ಮಂದಿರು ಬೆಳೆಬಿತ್ತದೆ ಪಾಳು ಬಿದ್ದಿದ್ದ ತಮ್ಮ ಹೊಲವನ್ನು ಒಂದಂಗುಲ ಸ್ಥಳವೂ ಬಿಡದೆ ಗುದ್ದಲಿಗಳಿಂದ ಅಗೆದು ಅಗೆದು ನೋಡಿದರು. ಬಹಳದಿನಗಳು ಪೂರ್ಣ ಹೊಲವನ್ನು ಹದಮಾಡಿ ಹುಡಿಕಿದಾಗ್ಯೂ ಹೂಳಿಟ್ಟ "ಚಿನ್ನದಕೊಡವು" ಅವರಿಗೆ ದೊರೆಯಲಿಲ್ಲ. ನಿರಾಶರಾಗಿ ಸುಮ್ಮನಿದ್ದರು. ಅದೇ ವರುಷ ಬಿತ್ತಿದ ಮೇಲೆ ಮಳೆಯು ಚೆನ್ನಾಗಿ ಹಾಗು ಸಾಕಾಗುವಷ್ಟು ಆದ ಕಾರಣ ಆ ವರುಷಪೈರು ಹುಲುಸಾಗಿ ಬೆಳೆದು ಶ್ರಮಕ್ಕೆ ಅನುಸಾರವಾಗಿ ಹೆಚ್ಚು ಧಾನ್ಯಫಲ ಕೊಟ್ಟಿತು. ಅದು ಅವರಉದರ ಪೋಷಣೆಗೂ ಸಾಕಾಗಿ ಇತರರಿಗೂ ಮಾರುವಷ್ಟು ಹೆಚ್ಚಾಗಿತ್ತು. ಮಾರಿದುದರಿಂದ ಹೆಚ್ಚು ಹಣ ಬಂದಿತು. ಇವರಿಂದ ಅವರಿಗೆ ಸೌಖ್ಯವೂ ಸಂತೋಷವೂ ತೃಪ್ತಿಯೂ ಉಂಟಾಯಿತು.

ಈ ಪಾಠವರಿತ ಅವರು ಪ್ರತಿವರುಷ ಹಾಗೇ ಶ್ರಮಪಟ್ಟು ಬೆಳೆಸಿ ಧನವನ್ನು ಸಂಪಾದಿಸಿ ಧನಿಕರಾದರು. ಧನಿಕರಾದ ಮೇಲೆ ಮಕ್ಕಳಿಗೆ ತಮ್ಮ ತಂದೆಯ ಮಾತಿನ ನಿಜವಾದ ಅರ್ಥವು ತಿಳಿದು ತಮ್ಮ ಹಿಂದಿನ ಅಜ್ಞಾನಕಕ್ಕಾಗಿ ನಾಚಿಕೊಂಡರು. ಈ ಪ್ರಕಾರ ಅತಿ ಜಾಣ್ಮೆಯಿಂದ ಸುಮಾರ್ಗಕ್ಕೆ ತನ್ನ ಪುತ್ರರನ್ನು ಹಚ್ಚಿ ಸುಖಿಗಳನ್ನಾಗಿ ಮಾಡಿದ ಅವರ ತಂದೆ

—ಹನುಮಂತಾಚಾರ್ಯ ಜೋ.ಶಿ.

**ಕೆಲಸ** —ಯು. ನಾಗೇಶ ಶೇಟ್

ಅಡಿಗೆಯ ಮಾಡುವುದಮ್ಮನ ಕೆಲಸ
ದುಡ್ಡನು ಗಳಿಸುವುದಪ್ಪನ ಕೆಲಸ
ಚಳಿಕಾಯಿಸುವುದಜ್ಜಿಯ ಕೆಲಸ
ಬುದ್ಧಿಯ ಹೇಳುವುದಜ್ಜನ ಕೆಲಸ
ದೇಶವನಾಳ್ವುದು ರಾಜನ ಕೆಲಸ
ಮನೆಯನು ಕಾಯ್ವುದು ನಾಯಿಯ ಕೆಲಸ
ಆಟವಾಡುವುದು ನನ್ನಯ ಕೆಲಸ
ಕಥೆಯನು ಬರೆವುದು ಮಾಮನ ಕೆಲಸ

ಒಗಟಿಗೆ ಉತ್ತರ.

1. ಧ್ವನಿ.
2. ಪುಸ್ತಕ.
3. ಹಾಡು.
4. ಔಷಧ.
5. ಅಡಿಕೆ.
6. ಊಟದ ಎಲೆ.
7. ವರ್ಷ, ತಿಂಗಳು, ದಿನ, ತಿಥಿ,

ನಿಮಗಿದು ಗೊತ್ತೆ—ಉತ್ತರ

1. ವಿಚಿತ್ರ
2. ಸಂದೇಹ
3. ಉಗುರು
4. ಗಣಪತಿ
5. ಗೋಪುರ




## ಬೆಂಕಿ ಕಡ್ಡಿಯನ್ನು ಮುರಿದು ಯಥಾಪ್ರಕಾರ ಸೇರಿಸುವುದು

ಆಟಗಾರನು ಹಿಡಿದುಕೊಂಡು ಬಂದ ಕೈ ಚೌಕದ ಮಡಿಕೆಗಳಲ್ಲಿ ಒಂದು ಹೊಸಾ ಗೊಳ ಬೆಂಕಿ ಕಡ್ಡಿಯನ್ನು ಇಟ್ಟಿದ್ದರೆ, ಪ್ರೇಕ್ಷಕರಲ್ಲಿ ಒಬ್ಬನು ಆ ಕಡ್ಡಿಯನ್ನು ಮುರಿಯುತ್ತಾನೆ. ಮಂತ್ರಗಾರ ಆ ಚೌಕವನ್ನು ಕೊಡಹಿದರೆ ಬೆಂಕಿಕಡ್ಡಿ ಯಥಾ ರೀತಿಯಾಗಿಯೇ ಇರುತ್ತದೆ. ಇದು ಹೇಗೆ ಸಾಧ್ಯವಾಗುವುದೆಂದು ನಿಮ್ಮ ಊಹೆ?



ಈಟ್ರಿಕ್ ಮಾಡುವ ಮೊದಲು ಒಂದು ಕೈ ಚೌಕವನ್ನು ಸಿದ್ಧ ಪಡಿಸಿಕೊಳ್ಳಬೇಕು. ಚೌಕದ ಅಂಚುಗಳನ್ನು ಮಡಿಚಿ ಹೊಲೆದಿರಬೇಕು. ಆ ಮಡಿಕೆಗಳಲ್ಲಿ ನೀನು ಈಮೊದಲೇ ಒಂದು ಬೆಂಕಿಕಡ್ಡಿಯನ್ನು ಸೇರಿಸಿರುವೆ. ಈ ರೀತಿ ತಯಾರಾದ ಕೈ ಚೌಕದಿಂದ ನೀನು ಸಭೆಗೆ ಬರಬೇಕೆಂದಾಯಿತು.

ಪ್ರೇಕ್ಷಕರ ಎದುರು ನಿಂತು ಕೈ ರುಮಾಲನ್ನು ಬೆಂಚಿನ ಮೇಲೆ ಹಾಸು. ಇಲ್ಲ ಅಂಗೈಯಲ್ಲಿಟ್ಟುಕೊ. ತರುವಾಯ ಪ್ರೇಕ್ಷಕರಲ್ಲಿ ಯಾರನ್ನಾದರೂ ತಮ್ಮ ಹತ್ತಿರವಿರುವ ಬೆಂಕಿ ಕಡ್ಡಿಯನ್ನೊಂದು ಚೌಕದ ಮಧ್ಯದಲ್ಲಿಡುವಂತೆ ಹೇಳು. ಹಾಗಿಟ್ಟ ತರುವಾಯ ನೀನು ಕೈ ಚೌಕವನ್ನು ಮಡಿಚು. ನೀನು ಮಡಿಚಿಸುವಾಗ, ಅದಕ್ಕೆ ಮೊದಲೇ ಬಚ್ಚಿಟ್ಟಿರುವ ಬೆಂಕಿಕಡ್ಡಿಯ ಅಂಚು ಮೇಲೆ ಬರುವಂತೆ ಮಾಡಿ, ಪ್ರೇಕ್ಷಕನು ಇಟ್ಟ ಬೆಂಕಿಕಡ್ಡಿ ಕೈ ಚೌಕದ ಮಡಿಕೆಯ ಕೆಳಗಡೆಯಿರುವಂತೆ ಮಾಡಬೇಕು ಆಗ ಪ್ರೇಕ್ಷಕನನ್ನು ಕೂಗಿ, ಮೇಲಿರುವ ಬೆಂಕಿಕಡ್ಡಿಯನ್ನು ಮುರಿಯುವಂತೆ ಹೇಳು ಅವನು ಅದೇ ರೀತಿ ಮಾಡುವನು ಬೆಂಕಿಕಡ್ಡಿ ಮುರಿದ ಶಬ್ದ ಸಭಿಕರಿಗೆ

ಕೇಳಿಸುವುದು. ತರುವಾಯ ನೀನು ಯಾವು ದೋ ಮಂತ್ರ ಪಠಿಸಿದಂತೆ ನಟಿಸಿ, ನಿನ್ನ ಕೈಯನ್ನು ಚೌಕದ ಸುತ್ತಲೂ ತಿರುಗಿಸಿ, ಅದರ ಮಡಿಕೆಗಳನ್ನು ಬಿಚ್ಚು. ಪ್ರೇಕ್ಷಕನು ತನ್ನ ಕೈಯಿಂದಸ್ವತಃ ಮುರಿದಕಡ್ಡಿ ಯಥಾ ರೀತಿಯಿರುವುದನ್ನು ಕಂಡು ಆಶ್ಚರ್ಯ ಪಡುತ್ತಾನೆ.

ಪ್ರೇಕ್ಷಕರಿಗೆ ಅನುಮಾನ ಬರದಂತಿರಲು ಅವರು ಕೈ ಚೌಕದಲ್ಲಿಡುವ ಬೆಂಕಿಕಡ್ಡಿಯ ಗುರುತು ಇಟ್ಟುಕೊಳ್ಳಬಹುದು. ನೀನು ಕೈ ಚೌಕವನ್ನು ಕೊಡವಿ ತೋರಿಸಿದಾಗ ಅವರು ಗುರುತಿಟ್ಟುಕೊಂಡಿರುವ ಬೆಂಕಿಕಡ್ಡಿ ಕಾಣಿ ಸಲು ನಿನ್ನ ಟ್ರಿಕ್ಕಿನ ವಿಷಯದಲ್ಲಿ ಅವರಿಗೆ ಮತ್ತಷ್ಟು ನಂಬಿಕೆ ಉಂಟಾಗುವುದು.

ಚಿತ್ರಗಳನ್ನು ನೋಡು. ಅಂಚನ್ನು ಮಡಿ ಸಿಟ್ಟು ಹೊಲೆದ ಕೈ ಚೌಕ ಹೇಗಿರಬೇಕೋ, ನೀನು ಬೆಂಕಿಕಡ್ಡಿಯನ್ನು ಎಲ್ಲಿ ಬಚ್ಚಿಡ ಬೇಕೋ ಮೊದಲನೇ ಚಿತ್ರದಲ್ಲಿ ಕಾಣಿಸಿದೆ. ಆ ರೀತಿ ಸಿದ್ಧವಾದ ಕೈ ಚೌಕದೊಂದಿಗೆ ಪ್ರೇಕ್ಷಕನು ಬೆಂಕಿಕಡ್ಡಿಯನ್ನು ಇಟ್ಟು ತರು ವಾಯ ಬೆಂಕಿಕಡ್ಡಿ ಮಾಮೂಲಾಗಿ ಕಾಣಿಸು ವುದು ಅದರ ಪಕ್ಕದ ಚಿತ್ರದಲ್ಲಿದೆ.

[ಪಾಠಕರು ಈ ಗಾರುಡಿಯನ್ನು ಕುರಿತು ಸಲಹೆ ಪಡೆಯಬೇಕೆಂದರೆ ಅವರು 'ಚಂದಮಾಮ' ನ ಹೆಸರು ಸೂಚಿಸಿ ಪ್ರೊಫೆಸರಿಗೆ ಇಂಗ್ಲೀಷಿನಲ್ಲಿ ಪತ್ರ ಬರೆಯಬೇಕು. ಅವರ ವಿಳಾಸ:
ಪ್ರೊಫೆಸರ್. ಪಿ. ಸಿ. ಸರ್ಕಾರ್ ಮೆಜಿಷಿಯನ್, ಪೋಸ್ಟ್‌ಬಾಕ್ಸ್ 7878. ಕಲಕತ್ತಾ 12]

## ನಗೆ—ಹನಿ

ಸೆನ್ಸಸ್ ಅಧಿಕಾರಿ—(ಹೆಂಗಸಿಗೆ) ನಿಮ್ಮ ಯಜಮಾನರ ಹೆಸರೇನಮ್ಮ?

ಹೆಂಗಸು—(ನಾಚುತ್ತಾ) ಇಲ್ಲಪ್ಪಾ.

ಅಧಿಕಾರಿ — ಯಾರಿಗಮ್ಮಾ ಕೇಳ್ತಿರೋದು? ಹೇಳು ಜಾಗ್ರತೆ.

ಹೆಂಗಸು—ಇಲ್ಲಪ್ಪಾ ಅಂದ್ರೆ!

ಅಧಿಕಾರಿ—ಅಯ್ಯೋ, ಯಜಮಾನ್ರೇ ಇಲ್ವೆ ನಿನಗೆ?

ಹೆಂಗಸು—ಅಯ್ಯಯ್ಯೋ ಅಲ್ಲಪ್ಪಾ! ಅವರ ಹೆಸರೇ 'ಇಲ್ಲಪ್ಪಾ' ಅಂತ.

* * *

ಮೇಷ್ಟ್ರು—ಲೋ ಸಿದ್ಧ, ಲಿಂಗಗಳೆಷ್ಟೋ?

ಸಿದ್ಧ—ಮೂರು ಸಾರ್.

ಮೇಷ್ಟ್ರು—ವೆರಿ ಗುಡ್!, ಯಾವ್ಯಾವುದೋ?

ಸಿದ್ಧ—ಕಾಶಿಯಲ್ಲಿ ಶಿವಲಿಂಗ, ರಾಮೇಶ್ವರದಲ್ಲಿ ರಾಮಲಿಂಗ, ಇಲ್ಲಿರುವ ನಾನು ಸಿದ್ಧಲಿಂಗ ಸಾರ್.

—ಡಿ. ಪಿ. ಶ್ರೀನಿವಾಸ.

ಗೋವಿಂದರಾಯರು— ಏನಯ್ಯಾ, ಪೋಸ್ಟು ಮನ್, ಕಾಗದವನ್ನು ನನ್ನ ಕೈಗೆ ಕೊಡೋದು ಬಿಟ್ಟು ಕಾಲುಗಳಮೇಲೆ ಏಕೆ ಹಾಕಿದೆ?

ಪೋಸ್ಟುಮನ್— "ಹಾಸನ ಗೋವಿಂದ ರಾಯರ ಪಾದಪದ್ಮಂಗಳಿಗೆ" ಎಂದು ಅದ ರಲ್ಲೇ ಬರೆದಿದೆಯಲ್ಲಾ ಸಾರ್! ಅದರಲ್ಲಿ ಬರೆ ದಂತೆ ಮಾಡಿದೆ.

* * *

ಜಡ್ಜಿ—ವರ್ಷಕ್ಕೆ ಇಷ್ಟುಸಲ ನೀನು ಕೋರ್ಟಿಗೆ ಬರುತ್ತೀಯಲ್ಲ, ಇಷ್ಟಾದರೂ ನಿನಗೆ ನಾಚಿಕೆ ಯಾಗಲಿ, ಬುದ್ಧಿಯಾಗಲಿ ಇಲ್ಲವೆ?

ಅಪರಾಧಿ—ನನಗೆ ಹೋಗಲಿ; ತಾವು ದಿನಾಲು ಬರ್ತೀರಲ್ಲಾ ಸಾರ್.

—ಹಳದೀಪುರ ಕಾಂತುಪ್ರಭು.




ಈ ಚಿತ್ರದಲ್ಲಿ ಎಲ್ಲೆಲ್ಲಿ ಯಾವ ಬಣ್ಣಗಳನ್ನು ಹಾಕಬೇಕೋ ನೋಡಿ ಹಾಕಿರಿ. ಮುಂದಿನ ತಿಂಗಳ ಚಂದಮಾಮದಲ್ಲಿ ನಾವು ಹಾಕುವ ಅದೇ ಬಣ್ಣದ ಚಿತ್ರದೊಂದಿಗೆ ಹೋಲಿಸಿ ನೋಡಿ.

Controlling Editor : SRI CHAKRAPANI

